

21
ಅಚಲ
ದ್ವೈಮಾಸಿಕ ಮಾರ್ಚ್-1994
ಸುನಂದ ಬೆಳಗಾಂವ್‌ಕರ್ ಅವರ 'ನಾಸು'—ಬಿ. ಎನ್. ಸುಮಿತ್ರಾಬಾಯಿ
* ಒಂದು ಸುಸಂಗತ ಅತೀತದ ಹುಡುಕಾಟದಲ್ಲಿ—ಡಾ॥ ವಿಜಯಾ ದಬ್ಬೆ
ಶಬ್ದವೇಗವನ್ನು ಮೀರಿದ ಹಾರಾಟಗಾರ್ತಿ — ನೇಮಿ
* ನಿಮ್ಮ ಪತಿ ಸಿಗರೇಟು ಸೇದುವರೆ ? — ಚಂದ್ರ
ಹೀಗೊಂದು ಅನುಭವ — ಸುಮ
ಸೀತೆಯ ಸಾವು — ಸ. ಉಷಾ
ಕಾನೂನು ಅರಿವು ಹೇಗೆ ? — ಗೌರಿ
ಸಿರಿಸಂಪಿಗೆ ಕಾವ್ಯಾತ್ಮಕ ದೃಶ್ಯ ಪ್ರಯೋಗ — ಎಸ್. ಸಂಧ್ಯಾ

"ಅಚಲ" ಪತ್ರಿಕೆಯನ್ನು ಪಡೆಯ ಬಯಸು ವವರು ದಯವಿಟ್ಟು ಕೆಳಗಿನ ವಿಳಾಸಕ್ಕೆ ಹದಿನೈದು ರೂಪಾಯಿಗಳನ್ನು ಎಂ. ಓ/ಡ್ರಾಫ್ಟ್ ಮೂಲಕ ಕಳುಹಿಸಿ, ಕೂಪನ್‌ನಲ್ಲಿ ತಮ್ಮ ವಿಳಾಸವನ್ನು ಸ್ಪಷ್ಟ ವಾಗಿ ಬರೆಯಬೇಕು. ಚೆಕ್ ಮೂಲಕ ಹಣ ಕಳಿಸು ವವರು 20/ರೂ. ಗಳಿಗೆ ಕಳಿಸಬೇಕು. ಚಂದಾದಾರರು ತಮ್ಮ ವಿಳಾಸ ಬದಲಾದರೆ ಕೂಡಲೆ ಕಾರ್ಡಿನಲ್ಲಿ ಬರೆದು ತಿಳಿಸಬೇಕು.



ಚಂದಾ ವಿವರ :

| | | | |
|---|---|---|---|
| ವಾರ್ಷಿಕ ಚಂದಾ | : | ರೂ. | 15-00 |
| ಅಜೀವ ಚಂದಾ | : | ರೂ. | 150-00 |
| ಚೆಕ್ ಮೂಲಕ | : | ರೂ. | 160-00 |
| ಸಂಸ್ಥೆಗಳಿಗೆ | : | ರೂ. | 200-00 |
| ಬಿಡಿ ಪ್ರತಿ | : | ರೂ. | 2-00 |
| ವಿಶೇಷ ಪ್ರತಿ | : | ರೂ. | 3-50 |

Printed at Janashakthi Printers
5th Main Road, Gandhinager
BANGALORE-560 009

Published by, Dr. G. Ramakrishna
on behalf of Jagruthi Mahila Adhyayana
Kendra, 26, I Main Road, Vyalikaval
BANGALORE-560 003

Editor : N. Gayathri

ಪ್ರಿಯ ಚಂದಾದಾರರೇ,

ಚಂದಾ ನವೀಕರಿಸಿ, ನಿಮ್ಮ ಸ್ನೇಹವಲಯಕ್ಕೂ "ಅಚಲ" ಪರಿಚಯಿಸಿ. ಎಂ. ಓ. ಮೂಲಕ ಚಂದಾ ದಾರರಾಗುವವರಲ್ಲಿ ವಿಶೇಷ ವಿನಂತಿ. ಎಂ. ಓ. ಫಾರಂನಲ್ಲಿ ತಪ್ಪದೆ ನಿಮ್ಮ ವಿಳಾಸ ಬರೆಯಿರಿ. ಹೀಗೆ ವಿಳಾಸ ಬರೆಯದೆ, ಹಣ ಸಂದಾಯ ಮಾಡುವ ಪ್ರಕರಣಗಳು ಈಗ ಹೆಚ್ಚುತ್ತಿವೆ. ದಯವಿಟ್ಟು ಮರೆಯದೆ ನಿಮ್ಮ ವಿಳಾಸ ಬರೆಯಿರಿ.

**ಲೇಖನ, ಹಣ ಕಳುಹಿಸಬೇಕಾದ ವಿಳಾಸ :**

**ಎನ್. ಗಾಯಿತ್ರಿ**
ಬಿ-30, ರಿಸರ್ವ್ ಬ್ಯಾಂಕ್ ಸ್ಟಾಫ್ ಕ್ವಾರ್ಟರ್ಸ್
9ನೇ ಕ್ರಾಸ್, ಒಂದನೆ ಮೇನ್, ವಿಜಯನಗರ
2ನೇ ಹಂತ, ಬೆಂಗಳೂರು-560 040

ಆತ್ಮೀಯರೇ,

'ಅಚಲ' ಈ ಸಂಚಿಕೆಯೊಂದಿಗೆ ಹತ್ತನೆಯ ವರ್ಷಕ್ಕೆ ಕಾಲಿಡುತ್ತಿದೆ. ಈ ಒಂಭತ್ತು ವರ್ಷಗಳಲ್ಲಿ ಅದು ಯಶಸ್ವಿಯಾಗಿ ಪ್ರಕಟವಾಗುವುದಕ್ಕೆ ಸಹಕರಿಸಿರುವ ಎಲ್ಲ ಲೇಖಕರು, ಚಂದಾದಾರರು, ಜಾಹೀರಾತುದಾರರು ಹಾಗೂ ಹಿತೈಷಿಗಳ ಪ್ರೀತಿ, ವಿಶ್ವಾಸಕ್ಕೆ ನಮ್ಮ ಅನಂತ ಕೃತಜ್ಞತೆಗಳು.

ಆದರೆ ಈ ಪತ್ರಿಕೆ ಇನ್ನೂ ಹೆಚ್ಚು ಅರ್ಥಪೂರ್ಣ ವಾಗಿ, ಸಶಕ್ತವಾಗಿ ಹೊರಬರಲು ಹೆಚ್ಚಿನ ಚಂದಾ ದಾರರ, ವಿಚಾರವಂತ ಲೇಖಕರ ಹೆಚ್ಚಿನ ಸಹಕಾರದ ಅಗತ್ಯವಿದೆ. ಅಷ್ಟೇ ಅಲ್ಲ, ಓದುಗರ ಟೀಕೆ, ಟಿಪ್ಪಣಿ ಗಳು ಪತ್ರಿಕೆಯನ್ನು ಬೆಳೆಸುತ್ತದೆ; ತಿದ್ದುತ್ತದೆ. ಇದಕ್ಕೆ ಹೃತ್ಪೂರ್ವಕ ಸ್ವಾಗತವಿದೆ.

# ಸಂಪಾದಕೀಯ

## ಕೊನೆಗಾಣಿಸಬೇಕಾದ ಲಿಂಗಬೇಧ

ಪೂರಿಯ ಶಂಕರಾಚಾರ್ಯ ಪೀಠ ಆಗಿಂದಾಗ್ಗೆ 'ಸುದ್ದಿ'ಗೆ ಮನೆ ಮಾತಾಗಿದೆ. ಈಗಿನ ಪೂರಿಯ ಸ್ವಾಮಿ ನಿಶ್ಚಯಾನಂದ ಸರಸ್ವತಿಗಳು ಮತ್ತೊಮ್ಮೆ ತಮ್ಮ ಧಾರ್ಮಿಕ ಸಂಕುಚಿತತೆಯನ್ನು, ಕೊಳಕು ಮನೋಭಾವವನ್ನು ಪ್ರಕಟಿಸಲು ಹಿಂದೆ ಬಿದ್ದಿಲ್ಲ. ಹರಿಜನರನ್ನು ಬಹಿರಂಗವಾಗಿ ಅಪಮಾನಿಸಿದ, 'ಸತಿ ಪದ್ಧತಿ'ಯನ್ನು ಪ್ರೋತ್ಸಾಹಿಸಿದ ಈ ಮಠದ ಹಿಂದಿನ ಸ್ವಾಮಿಗಳ ಪರಂಪರೆಗೆ ತಮ್ಮ ಅಮೂಲ್ಯವಾದ ಕೊಡುಗೆಯನ್ನು ನೀಡಲು ಹಿಂದೆ ಬೀಳದ ಈಗಿನ ಸ್ವಾಮಿ 'ಮಹಿಳೆಯರು ವೇದ ಪಠಣ ಮಾಡಲು ಅನರ್ಹ'ರೆಂಬ ಹೊಸ ಕೂಗು ಎತ್ತಿದ್ದು, ಅದು ಅವರು ಪ್ರತಿನಿಧಿಸುವ ಸ್ಥಾನ ಮತ್ತು ಸಿದ್ಧಾಂತಕ್ಕೆ ಅಣಕವಾಗಿದೆ.

ಇಪ್ಪತ್ತು ವರ್ಷಗಳಿಂದಲೂ ಕಲ್ಕತ್ತೆಯ ಸಾರ್ವಜನಿಕ ಸಮಾರಂಭಗಳಲ್ಲಿ ವೇದ ಪಠಣ ಮಾಡುತ್ತಿದ್ದು ಪ್ರಖ್ಯಾತರಾಗಿರುವವರು ಡಾ॥ ಅರುಂಧತಿ ರಾಯ್ ಚೌಧುರಿಯವರು. ಅವರು ಕಲ್ಕತ್ತೆಯಲ್ಲಿ ಶಾರದೇಶ್ವರಿ ಆಶ್ರಮದ ಶತಮಾನೋತ್ಸವ ಸಮಾರಂಭದಲ್ಲಿ ವೇದಪಠಣ ಮಾಡಲು ಆರಂಭಿಸಿದಾಗ ಸ್ವಾಮೀಜಿಯ ಅಜ್ಞೆಯಿಂದಾಗಿ ನಿಲ್ಲಿಸಲ್ಪಟ್ಟದ್ದು ಈಗ ಬಹಿರಂಗವಾದ ವಿಷಯ. ಲಿಂಗಬೇಧದ ಕ್ರೂರ ನೀತಿಯ ಆಳವಾದ ಬೇರುಗಳಿಗೆ ಇದಕ್ಕಿಂತ ಮತ್ತೊಂದು ನಿದರ್ಶನ ಬೇಕೇ ?

ಈ ಘಟನೆಯ ನಂತರ ಇದನ್ನು ವಿರೋಧಿಸಿ ಪ್ರತಿಭಟನೆಗಳು ನಡೆದವು. ಸಮರ್ಥಿಸಿಕೊಳ್ಳುವ ಪ್ರಯತ್ನಗಳೂ ನಡೆದವು. ಆದರೂ ಇವೆಲ್ಲದರ ಹಿಂದೆ ಕೊಳಕು ಮನಸ್ಸಿನ ಕ್ರೂರ ಚಿಂತನೆಯ ಬಲಿಷ್ಠ ಎಳೆಯೊಂದು ಜನಸಮುದಾಯವನ್ನು ಕಲುಷಿತಗೊಳಿಸಬು ಸನ್ನದ್ಧವಾಗಿ ನಿಂತದ್ದನ್ನು ಕಾಣುತ್ತೇವೆ. ಇಂದು ಮಹಿಳೆಯರು ವೇದಾಧ್ಯಯನ ಮಾಡುವ ಸಾಮರ್ಥ್ಯ, ಸ್ವಾತಂತ್ರ್ಯ ಹೊಂದಿದ್ದಾರೆ ; ಹಾಗೂ ಆಸಕ್ತಿಯುಳ್ಳವರು ಅದನ್ನು ಅಧ್ಯಯನ ವಿಷಯವನ್ನಾಗಿಯೂ ಆರಿಸಿಕೊಂಡಿದ್ದಾರೆ. ಇಂತಹ ಪರಿಸ್ಥಿತಿಯಿರುವಾಗ ಸಾರ್ವಜನಿಕ ಸಮಾರಂಭದಲ್ಲಿ, ಎಲ್ಲರ ಸಮ್ಮುಖದಲ್ಲಿ, ವ್ಯವಸ್ಥಾಪಕರೇ ಆಹ್ವಾನಿಸಿರುವ ಮಹಿಳೆಯನ್ನು ಅವಮಾನಿಸುವ ಧಾರ್ಷ್ಟ್ಯ ತೋರಿದ ಸ್ವಾಮೀಜಿಗೆ ಧಿಕ್ಕಾರವಿರಲೇಬೇಕು ! ಅಂತಹ ಸ್ವಾಮೀಜಿಯನ್ನು ಒಪ್ಪಿಕೊಳ್ಳುವ, ಆರಾಧಿಸುವ ಮನಸ್ಸುಗಳ ಭಂಡತನಕ್ಕೆ ಏನನ್ನಬೇಕು ?

*   *   *   *   *

ಕೊಡಗು ಜಿಲ್ಲೆಯ ಶ್ರೀಮತಿ ಕೆ. ಎಮ್. ಶಾರದಾರವರು ಸಹಾನುಭೂತಿಪರ ಕಾರಣಗಳಿಗಾಗಿ ಉದ್ಯೋಗವಕಾಶವನ್ನು ಪಡೆಯಲು ಇರುವ ಅವಕಾಶವನ್ನು ಬಳಸಿಕೊಳ್ಳಲು ಪೋಲಿಸ್ ಇಲಾಖೆಗೆ 1989ರಲ್ಲಿ ಅರ್ಜಿ ಸಲ್ಲಿಸಿದ್ದರು. ಸಬ್‌ಇನ್‌ಸ್ಪೆಕ್ಟರ್ ಆಗಿದ್ದ ಅವರ ತಂದೆ ವೃತ್ತಿಯಲ್ಲಿದ್ದಾಗಲೇ ಮಧ್ಯದಲ್ಲಿ ಗತಿಸಿದ್ದರಿಂದ ಅಡ್‌ಮಿನಿಸ್ಟ್ರೇಟಿವ್ ಟ್ರಿಬ್ಯೂನಲ್ ಆ್ಯಕ್ಟ್ 1985 (19ನೇ ಸೆಕ್ಷನ್)ನಲ್ಲಿ ನಮೂದಿಸಿರುವ ಸೌಲಭ್ಯವನ್ನು ಪಡೆಯಲು ನಿರ್ಧರಿಸಿದರು. ವಿಧವೆ ತಾಯಿ ಹಾಗೂ ಆರು ಮಕ್ಕಳ ಕುಟುಂಬದಲ್ಲಿ ಹಿರಿಯಳಾದ ಶಾರದಾರವರಿಗೆ ಈ ಉದ್ಯೋಗದ ಅವಶ್ಯಕತೆಯಿತ್ತು. ಅವರ ಅರ್ಜಿಯನ್ನು ಪರಿಗಣಿಸಿದ ಪೋಲಿಸ್ ಇಲಾಖೆಯು ಶ್ರೀಮತಿ ಶಾರದಾರವರನ್ನು ಉದ್ಯೋಗಕ್ಕೆ ಆಯ್ಕೆ ಮಾಡಿ ಕಾಯ್ದಿರಿಸುವಿಕೆಯ ಪಟ್ಟಿಯಲ್ಲಿ ಅವರ ಹೆಸರನ್ನು ಸೇರಿಸಿರುವುದಾಗಿ ಪತ್ರಮುಖೇನ ಅವರಿಗೆ ತಿಳಿಸಿದರು. ಈ ಮಧ್ಯೆ ಶಾರದಾರವರು ವಿವಾಹಿತರಾದರು. ವಿವಾಹಿತ ಮಗಳಿಗೆ ಈ ಉದ್ಯೋಗದ ಸೌಲಭ್ಯ ಕೊಡಬೇಕಿಲ್ಲವೆಂದು ಮನಗಂಡ ಇಲಾಖೆಯು ಶ್ರೀಮತಿ ಶಾರದಾರವರಿಗೆ ವಿವಾಹಿತರಾದ್ದರಿಂದ ಅವರಿಗೆ ನೌಕರಿ ದೊರೆಯುವುದಿಲ್ಲವೆಂಬುದನ್ನು ಪತ್ರದಲ್ಲಿ ತಿಳಿಸಿದರು. ವಿವಾಹಿತ ಮಗನಿಗೆ ಇರುವ ಸೌಲಭ್ಯ ವಿವಾಹಿತ ಮಗಳಿಗೆ ಏಕಿಲ್ಲ ? ಎಂದು ನ್ಯಾಯಾಲಯದಲ್ಲಿ ಪ್ರಶ್ನಿಸಿದ ಶ್ರೀಮತಿ ಶಾರದಾ

ರವರು ಬೆಂಗಳೂರಿನ ಅಡ್‌ಮಿನಿಸ್ಟ್ರೇಟಿವ್ ಟ್ರಿಬ್ಯೂನಲ್‌ನಲ್ಲಿ ತಮ್ಮ ಕಡೆಗೇ ನ್ಯಾಯ ಪಡೆದುಕೊಂಡರು, ಉದ್ಯೋಗ ದಕ್ಕಿಸಿಕೊಂಡರು.

ಈ ಪ್ರಕರಣ ಕೆಲವೊಂದು ಮೂಲಭೂತ ಪ್ರಶ್ನೆಗಳನ್ನು ಎತ್ತುತ್ತದೆ. ಭಾರತ ಸಂವಿಧಾನದ ಆರ್ಟಿಕಲ್ 14ರ ಪ್ರಕಾರ ಸ್ತ್ರೀ ಪುರುಷರಿಬ್ಬರೂ ಸಮಾನರು ಎಂದು ಸಾರಿದರೂ ಗತಿಸಿದ ತಂದೆ ತಾಯಿಗಳ ನೌಕರಿಯನ್ನು ಸಹಾನುಭೂತಿಯ ಕಾರಣಕ್ಕಾಗಿ ಪಡೆಯುವ ಸಂದರ್ಭ ಬಂದಾಗ ಮಾತ್ರ ವಿವಾಹಿತ ಮಗ ಮತ್ತು ವಿವಾಹಿತ ಮಗಳಲ್ಲಿ ತಾರತಮ್ಯವೇಕೆ ? ಎಲ್ಲರೂ ನ್ಯಾಯಾಲಯಕ್ಕೆ ಹೋಗಿ ನ್ಯಾಯ ಪಡೆಯಲು ಸಾಧ್ಯವೇ ? ಆಡಳಿತದ ನೀತಿ ನಿಯಮಾವಳಿಯಲ್ಲಿ ಸೂಕ್ತ ಬದಲಾವಣೆ ಮಾಡಲು ಸಾಧ್ಯವಿಲ್ಲವೇ ? ಇವು ಭಾರತೀಯ ಸಮಾಜದ ಕುಟುಂಬ ರಚನೆಯ ಬಗೆಗೇ ಎತ್ತಿದ ಮೂಲಭೂತ ಪ್ರಶ್ನೆಗಳಾಗಿ ನಮ್ಮ ಮುಂದೆ ನಿಲ್ಲುತ್ತವೆ.

'ಕೊಟ್ಟ ಹೆಣ್ಣು ಕುಲಕ್ಕೆ ಹೊರಗು' ಎಂಬುದನ್ನು ನಂಬಿ, ಆಚರಿಸುವ ಸಂಸ್ಕೃತಿ ವಿವಾಹಿತ ಮಗಳನ್ನು ಮಗನಂತೆ ಭಾವಿಸುವುದೇ ಇಲ್ಲ. ಆದರೆ ಮಗನಿಂದ ಇಡೀ ಕುಟುಂಬದ ಜವಾಬ್ದಾರಿಯನ್ನು ಹೊರ ಬೇಕೆಂದು ಸಮಾಜ ಅಪೇಕ್ಷಿಸುವುದರಿಂದ ಎಲ್ಲ ಸಾಮಾಜಿಕ ಕಾನೂನುಗಳು ಕುಟುಂಬದ ನಿರೀಕ್ಷೆಗೆ ಅನುಗುಣ ವಾಗಿಯೇ ರೂಪಿತವಾಗಿರುತ್ತವೆ. ವೃದ್ಧಾಪ್ಯದಲ್ಲಿ ತಂದೆ ತಾಯಿಗಳನ್ನು ನೋಡಿಕೊಳ್ಳುತ್ತಿರುವ ಹೆಣ್ಣುಮಕ್ಕಳು ನಿದರ್ಶನವಾಗಿ ಕಣ್ಣ ಮುಂದೆ ಹಲವಾರಿದ್ದರೂ ಕುಟುಂಬದ ಈ ನಂಬಿಕೆಯಂತೂ ಕಡಿಮೆಯಾಗಿಲ್ಲ. ಗಂಡು ಮಗನಿದ್ದೂ ಹೆತ್ತವರನ್ನು ನೋಡಿಕೊಳ್ಳದಿರುವ, ನೋಡಿಕೊಳ್ಳಲು ಸಾಧ್ಯವಿಲ್ಲದಿರುವ ಸಂದರ್ಭಗಳು ಎಷ್ಟಿಲ್ಲ ? ಡಾ॥ ವಿಜಯಾ ಮನೋಹರ ಅರ್ಬತ್‌ಳ ತಂದೆ ತನ್ನ ವೃದ್ಧಾಪ್ಯದಲ್ಲಿ ಮಗಳ ರಕ್ಷಣೆ ಬಯಸಿದರು. ನಿರಾಕರಿಸಿದ ಮಗಳಿಂದ ಸುಪ್ರೀಂ ಕೋರ್ಟಿನವರೆಗೂ ಹೋಗಿ ನಿರ್ವಹಣಾ ಭತ್ಯೆ ಪಡೆದು ಬಂದರು. ವೈಯಕ್ತಿಕವಾಗಿ ಈ ಕಾಯಿದೆಯ ಲಾಭ ಏನೇ ಇರಲಿ, ತಾತ್ವಿಕವಾಗಿ ಸ್ತ್ರೀ ಪುರುಷ ಸಮಾನತೆಯ ದಿಕ್ಕಿನಲ್ಲಿ ಇದೊಂದು ಮಹತ್ವದ ಹೆಜ್ಜೆಯಾಗಿ ವಿವ ಹಿತ ಮಗಳ ಜವಾಬ್ದಾರಿಯನ್ನು ವ್ಯಾಖ್ಯಾನಿಸುವ ಪ್ರಯತ್ನವಾಗಿದೆ.

ನಮ್ಮ ಸಮಾಜದಲ್ಲಿನ ಕುಟುಂಬದ ಸ್ವರೂಪ, ವಿವಾಹ ಸಂಸ್ಥೆಯ ಬಗೆಗಿರುವ ಪರಿಕಲ್ಪನೆಗಳು ಎಲ್ಲವೂ ಕ್ರಾಂತಿಕಾರಕ ಬದಲಾವಣೆಗೆ ಒಳಗಾಗದ ಹೊರತು ಕೇವಲ ಕಾನೂನಿನಿಂದ ಹೆಣ್ಣಿಗೆ ಸಾಮಾಜಿಕ ನ್ಯಾಯ ದೊರೆಯುತ್ತದೆನ್ನುವುದು ಕನಸಾಗುತ್ತದೆ. ಹೆಣ್ಣು ಎರಡು ಕುಟುಂಬಗಳ ನಡುವೆ ಎಸೆದಾಡುವ ಚಾಲ್ಚೆಂಡಲ್ಲ. ಹೆತ್ತವರಿಂದ, ಹುಟ್ಟಿದ ಮನೆಯಿಂದ ಕನ್ಯಾದಾನ ಮಾಡಿಸಿಕೊಂಡು, ಪರರ ಮನೆಯಲ್ಲೂ ಪರಕೀಯಳಾಗುವ ಹೆಣ್ಣಿನ ಕುಟುಂಬದ ಕಲ್ಪನೆ ಇಂದು ಬದಲಾಗಬೇಕಾದ ಅವಶ್ಯಕತೆಯಿದೆ. ಇದಕ್ಕೆ ಆಸ್ತಿಯ ಹಕ್ಕನ್ನು ವಿತರಿಸುವ ಕ್ರಮದಲ್ಲೂ ಮೂಲಭೂತ ಬದಲಾವಣೆ ತರಬೇಕು. ಅವಿವಾಹಿತ ಹೆಣ್ಣು, ವಿಚ್ಛೇದಿತ ಹೆಣ್ಣು, ನಿರಾಶ್ರಿತ ಹೆಣ್ಣು, ವಿಧವೆ—ಈ ಎಲ್ಲರಿಗೂ ತಮ್ಮದೊಂದು ಕುಟುಂಬ ಇದೆಯೆಂದು ಭಾವ ಮೂಡಬೇಕಾದರೆ 'ವಿವಾಹ' ಸಂಸ್ಥೆಯ ಔಚಿತ್ಯದ ಪುನರ್‌ವ್ಯಾಖ್ಯಾನವಾಗಬೇಕಾಗಿದೆ.

ವಿಶ್ವ ಸಂಸ್ಥೆಯು ಈ ವರ್ಷವನ್ನು ಅಂತರರಾಷ್ಟ್ರೀಯ ಕುಟುಂಬದ ವರ್ಷವನ್ನಾಗಿ ಆಚರಿಸಲು ಘೋಷಿಸಿದೆ. "ರಾಜ್ಯ ಯಂತ್ರವು ವರ್ಗ ಶೋಷಣೆಯ ಸಾಧನವಾದರೆ, ಕುಟುಂಬವು ಸ್ತ್ರೀಯನ್ನು ಶೋಷಿಸಲು ಪುರುಷನ ಸಾಧನವಾಯಿತು", ಎಂಬ ಸೂತ್ರದ ಹಿಂದಿರುವ ಅರ್ಥವನ್ನು ಗಮನಿಸಿದರೆ ನಮ್ಮ "ಕುಟುಂಬ"ದ ಸ್ವರೂಪದಲ್ಲಿಯೇ ಇರುವ ಶೋಷಣೆಯ ನೆಲೆಗಳು ಅರ್ಥವಾಗುತ್ತವೆ. ಬೆಲೆಯಿಲ್ಲದ ದುಡಿಮೆಯಿಂದ ಕುಟುಂಬ ವನ್ನು ಪೋಷಿಸಿ, ಪಾಲಿಸುವ ಹೆಣ್ಣು, ತನ್ನ ವ್ಯಕ್ತಿತ್ವದ ವಿಕಾಸಕ್ಕೆ, ಸಮರ್ಥನೆಗೆ, ಸ್ವಂತಿಕೆಯ ಶೋಧಕ್ಕೆ ತನ್ನ 'ದುಡಿಮೆ'ಗೆ ಕುಟುಂಬದಾಚೆಗಿನ ಸಾಮಾಜಿಕ ಮೌಲ್ಯವನ್ನು ಪಡೆಯಲೇಬೇಕಾಗುತ್ತದೆ. ಕುಟುಂಬದಲ್ಲಿಯ ತನ್ನ ದಾಸ್ಯದ ಬೇರುಗಳು ಆಳುವ ವರ್ಗದ 'ವರ್ಗ ಸಮಾಜ'ದಲ್ಲಿವೆ ಎಂಬುದನ್ನು ಮನವರಿಕೆ ಮಾಡಿಕೊಂಡಾಗ ಸಮಗ್ರವಾದ ಕುಟುಂಬ ಬದಲಾವಣೆಗೆ, ತನ್ಮೂಲಕ ಸಾಮಾಜಿಕ ಬದಲಾವಣೆಗೆ ಮಹಿಳೆ ನಾಂದಿ ಹಾಡಬಲ್ಲಳು. ಈ ಅಂತರರಾಷ್ಟ್ರೀಯ ಕುಟುಂಬ ವರ್ಷ ಆ ದಿಸೆಯತ್ತ ಚಿಂತಿಸಲು ನಮ್ಮನ್ನು ಪ್ರೇರೇಪಿಸಬೇಕಾಗಿದೆ.

—ಎನ್. ಗಾಯತ್ರಿ

# ಸೀತೆಯ ಸಾವು

★ ಸ. ಉಷಾ

ಸೀತೆ
ಅಮ್ಮನ ಅಜ್ಜನ ತಮ್ಮನ ಮಗಳಂತೆ
ಸದಾ ಮಕ್ಕಳು ಮರಿ
ತುಂಬಿ ತುಳುಕುವ
ದೊಡ್ಡ ಮನೆಯಲ್ಲಿ
ಸೀತಮ್ಮ ಸೀತಕ್ಕ ಸೀತಜ್ಜಿ
ಎಂದಾರೂ ಯಾವ ಸಂಬಂಧಗಳ
ಹಿಡಿದು ಕರೆಯಲಿಲ್ಲ.

ಹುಟ್ಟಿದ ಹುಳುವಿನಿಂದ ಹಿಡಿದು
ಸಾವ ಮುದುಕರವರೆಗೂ
ಹೆತ್ತದ್ದಕ್ಕೆ ಹಲವುಳಿದದ್ದಕ್ಕೆ
ಕೂಸು ಕುನ್ನಿ ಕರಿವೆಮ್ಮೆಯ
ಅವಳ ಕೈಗೊಪ್ಪಿಸಿ
ಊರೂರು ತಿರುಗುವುದಕ್ಕೆ
ಮನೆ ಮಂದಿ
ಅಯ್ಯೋ ರಾಮಾ ಎನ್ನುವುದಿಲ್ಲ
ಸೀತೆ ಸೀತೆ ಎನ್ನುವರು

ಗಂಡನಿಲ್ಲದ ಮನೆಯ ತುಂಬ ಅತ್ತೆಯರು
ದೇಶಾಂತರ ಹೋದ ಗಂಡನ
ನೆನಪಿನ ಲಕ್ಷ್ಮಣರೇಖೆ
ಕೈತುಂಬ ಗಾಜುಬಳೆ ತಿದ್ದಿದ ಕುಂಕುಮ
ಹುಣ್ಣಿಮೆ ಕೆನ್ನೆಯ ಮೇಲೆ
ಅರಿಶಿನದ ಹೊನ್ನಗೆರೆ
ಸದಾ ಸ್ಥಾಯಿ
ಹುಟ್ಟಿದೆಲ್ಲ ಮಕ್ಕಳ ಹೊತ್ತು
ಹಾಸಿ ಹೊಚ್ಚಿ ತಟ್ಟಿ
ಮಲಗಿಸುವ ಹಡೆಯದ ತಾಯಿ

ದೊಡ್ಡ ಮನೆಯ ತುಂಬ ಗೋಡೆಗಳಿದ್ದರೂ
ಮನೆಯಿಂದ ಮನೆಗೆ
ಸಂಬಂಧ ಮಾಲೆಯ ಹಾಗೆ
ಸುತ್ತರಿಯುತ್ತಾ
ಕಾಲ ಹಾಕಿದಳು ಸೀತೆ

ಸೀತೆಗೆ ಸೀರಿಯಸ್ಸಂತೆ
ಎಂದಾರೋ ಅಂದುದು
ಕನಸಿನಲೆಂಬಂತೆ ಕೇಳಿತು
ದಾರಿ ಕೇಳಿ ವಾರ್ಡು ಹುಡುಕಿ ಹೋದರೆ
ಬೆರಳು ತೋರಿದಳು ನಿರ್ಲಿಪ್ತ ಶ್ವೇತಾಂಬರಿ
ನಾಲ್ಕನೇ ವಾರ್ಡು ಆರನೇ ಬೆಡ್ಡು ಕೋಮಾಕೇಸು

ನಿರಾಹಾರಕ್ಕೆ ಡ್ರಿಪ್ಪು ತಟಕು ತಟಕು ತ್ರಾಣ
ಮಂಚದಡಿ ಹೊರಹನಿಯುತ್ತಿದೆ
ತಟಕು ತಟಕು ಪ್ರಾಣ
ಕಟವಾಯ ಜೊಲ್ಲು ತೆರೆದ ಕಣ್ಣಿನಲಿ
ನಿಶ್ಚಿಂತೆ ಸೀತೆ ಸತ್ತಳು

ಹಡೆಯದ ಮಕ್ಕಳೆಲ್ಲ
ಚಂದಾ ಕೊಟ್ಟಂತೆ ಹಣವಿತ್ತು
ಬಾಡಿಗೆಯ ಜನ ಗತಿಕಾಣಿಸಿ
ಕೈಲಾಸವೋ ವೈಕುಂಠವೋ
ಕಂಡಳಂತೆ ಸೀತೆ
ಎಲ್ಲ ಈಗ ಅವರವರ ಗೂಡಿಗೆ

ಎಲ್ಲರ ಹೆಗಲಲ್ಲೂ ಒಂದೊಂದು
ವ್ಯಾನಿಟಿ
ಎಲ್ಲರಿಗು ಇದೆ ಅವರವರ ಆಫೀಸು
ಮಕ್ಕಳ ಬಿಡಲು ಅವರವರ ಕ್ರಷ್ಷು
ಹ್ಯಾಪಿ ಬರ್ತ್‌ಡೇಗೆ ಬೇಕರಿ ಕೇಕು

ಸೀತೆಯನು ಮರೆತರೆಂದಲ್ಲ
ಮದುವೆ ಮುಂಜಿಯ ಸಮಯ
ಮಕ್ಕಳು ಚಂಡಿ ಹಿಡಿದ ಹೊತ್ತು
ಹಪ್ಪಳ ಸಂಡಿಗೆ ಮಾಡುವ ದಿನ
ತಪ್ಪದೇ ನೆನೆಯುತ್ತಾರೆ
ಸೀತೆಯನ್ನ.

ಯಾಕೆಂದರೆ
ಈ ನೆಲದಲ್ಲಿನ್ನು ಸೀತೆಯರು ಹುಟ್ಟುವುದಿಲ್ಲ
ಹುಟ್ಟುವುದೂ ಬೇಡ ಬಿಡಿ.





# ಸುನಂದಾ ಬೆಳಗಾಂವಕರ್ ಅವರ 'ನಾಸು'

## ಒಂದು ಸ್ತ್ರೀವಾದಿ ನೋಟ

—ಡಾ|| ಬಿ. ಎನ್. ಸುಮಿತ್ರಾಬಾಯಿ

ಕನ್ನಡ ಕಾದಂಬರಿ ಕ್ಷೇತ್ರದ ಇತ್ತೀಚಿನ ಸಾಧನೆಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ನೋಡಿದಲ್ಲಿ ಆ ಕ್ಷೇತ್ರಕ್ಕೆ ಮೊದಲಿಗೆ ಕಾಲಿಡುತ್ತಿರುವ ಲೇಖಕಿಯೊಬ್ಬರು. ಈ ಮೊದಲ ಹೆಜ್ಜೆಯಲ್ಲೇ ವಿಶಿಷ್ಟವಾದ ಸತ್ವವನ್ನು, ಹೊಸ ಚೈತನ್ಯದ ಅಂಶವನ್ನೂ ತಂದು ಕೊಟ್ಟಿರುವುದು ತುಂಬ ಮಹತ್ವದ ಸಂಗತಿ.

'ಉತ್ತರ ಕರ್ನಾಟಕದ ಅದರಲ್ಲೂ ಧಾರವಾಡ, ಬೆಳಗಾಂವ, ವಿಜಾಪುರ ಜಿಲ್ಲೆಗಳ ಮಾಧ್ವ ಸಂಪ್ರದಾಯಸ್ಥರ ರೀತಿ-ನೀತಿ, ಆಚಾರ–ವಿಚಾರ, ಊಟ–ಉಡಿಗೆ, ಹಬ್ಬ–ಹುಣ್ಣಿಮೆ, ಹಾಡು–ಹಸೆ ಇತ್ಯಾದಿ ಮರೆತು ಹೋಗುತ್ತಿರುವ ಅನೇಕ ಸಂಪ್ರದಾಯಗಳನ್ನು ಸಾಹಿತ್ಯದಲ್ಲಿ ಹಿಡಿದಿಡುವ ಪ್ರಯತ್ನ' ತಮ್ಮದೆಂದು ಮುನ್ನುಡಿಯಲ್ಲಿ ಲೇಖಕಿ ಸೂಚಿಸುತ್ತಾರೆ. ತೋರಿಕೆಗೆ ಬಹು ಸಾಂಪ್ರದಾಯಿಕ ಪದಪುಂಜಗಳಲ್ಲಿ ತಮ್ಮದು ಪ್ರಾದೇಶಿಕ ಕಾದಂಬರಿಯೆಂದು ಇವರು ಸೂಚಿಸುತ್ತಿರಬಹುದು. ಆದರೆ ಈ ಘೋಷಣೆಯ ಮೂಲಕ ಅವರು ಅತ್ಯಂತ ಸ್ತ್ರೀಯಾತ್ಮಕವಾದಂಥ ಬದುಕಿನ ನೆಲೆಯನ್ನು ತಮ್ಮ ಕೃತಿಯ ದಾರ್ಶನಿಕ ನೆಲೆಗಟ್ಟನ್ನಾಗಿ (ಅರಿವಿಲ್ಲದೆಯೂ ?) ಮಾಡಿಕೊಂಡಿದ್ದಾರೆಂಬುದನ್ನು ಗಮನಿಸಬೇಕು. ಸ್ಥಳೀಯವಾದ ತಮ್ಮ ಅನುಭವಕ್ಕೆ ದಕ್ಕಿದ ಜನಪಂಗಡಗಳ ಸಾಂಸ್ಕೃತಿಕ ಬದುಕಿನ ಹಾಸು ಹೊಕ್ಕುಗಳನ್ನೇ ಕುರಿತು ಬರೆವ ಲೇಖಕಿಯರು ಎಂ. ಕೆ. ಇಂದಿರಾ ಮತ್ತು ವೈದೇಹಿ, ಕನ್ನಡ ಕಥಾ ಸಾಹಿತ್ಯಕ್ಕೆ ಸುಪರಿಚಿತರು. ಆದರೆ ಇಲ್ಲಿ ಸುನಂದಾ ಭಿನ್ನವಾಗುವುದು–ಕೇವಲ ಪ್ರಾದೇಶಿಕತೆಯ ಹಿನ್ನೆಲೆಯಿಂದಷ್ಟೇ ಅಲ್ಲ ಒಟ್ಟಾರೆ ಈ ಲೇಖಕಿಯ ಜೀವನ ದರ್ಶನ ಮತ್ತು ಬದುಕನ್ನು ನಿರೀಕ್ಷಿಸುವ ಕ್ರಮವೇ ಆ ಇಬ್ಬರು ಮಲೆನಾಡಿನ ಲೇಖಕಿಯರಿಗಿಂತ ಹೆಚ್ಚು ವ್ಯಾಪಕವಾದದ್ದು. ನಾನಿಲ್ಲಿ ಕಲೆಯ ಕುಸುರಿತನವನ್ನು ಕುರಿತು ಹೇಳುತ್ತಿಲ್ಲ. ಕಲೆಗಾರಿಕೆ ದೃಷ್ಟಿಯಿಂದ ವೈದೇಹಿ ಎದ್ದು ತೋರುವುದರಲ್ಲಿ ಸಂಶಯವಿಲ್ಲ. ಆದರೆ ತನಗೆ ಅತ್ಯಂತ ಆಪ್ತವಾದ ಒಂದು ಬದುಕಿನ ವಿಧಾನದ ಅನುಭವಗಳನ್ನು ನಿಜವಾದ ಒಳ್ಳೆಯ ಹಾಸ್ಯ, ವ್ಯಂಗ್ಯಗಳ ಒಳದನಿಯ ಮೂಲಕ ನೋಡುವ ಮತ್ತು ಸವಿಮರ್ಶವಾಗಿ ಅದಕ್ಕೆ ಕಲೆಯ ಒಪ್ಪ ಓರಣ ನೀಡುವ ದೃಷ್ಟಿಯಿಂದ ನನಗೆ ಸುನಂದಾ ನಮ್ಮ ನಡುವೆ ಇನ್ನು ಬಹಳಷ್ಟನ್ನು ನೀಡಬಲ್ಲ ಸಾಧ್ಯತೆಯಿರುವ ಲೇಖಕಿಯಾಗಿ ತೋರುತ್ತಾರೆ.

'ನಾಸು' ಕಾದಂಬರಿಯ ವಸ್ತುವೂ ಅಪರೂಪದ್ದು. ಚಿತ್ತಾಲರು, ಬೆನ್ನುಡಿಯಲ್ಲಿ ಹೇಳಿರುವಂತೆ ಇಲ್ಲಿನ ಪಾತ್ರಗಳು ತುಂಬ ಸಲ ಕನ್ನಡಿಗರಿಗೆ ಪರಿಚಿತರೇ ಅನ್ನಿಸಬಹುದು. ಆದರೆ ನೋಡಿರುವ ದೃಷ್ಟಿಕೋನ ಅಷ್ಟು ಪರಿಚಿತವಲ್ಲ. ಆದರಲ್ಲೂ ಅತ್ಯಂತ ದೊಡ್ಡ ವಿದ್ವಾಂಸ ಮನೆತನದಲ್ಲಿ, ಶುದ್ಧ ಜ್ಞಾನವಷ್ಟೇ ಬದುಕಿನ ದೊಡ್ಡ ಸಂಪತ್ತೆಂದು ತಿಳಿವ ಮೌಲ್ಯಗಳೆದುರಲ್ಲಿ ಕಲಿಕೆಯಲ್ಲಿ ಏನನ್ನೂ ಸಾಧಿಸದೆ ಪೆದ್ದನೆನಿಸುವ, ಆ ಕಾರಣಕ್ಕಾಗಿ ಪಡಬಾರದಷ್ಟು ಅವಮಾನ, ಹಿಂಸೆ, ಕ್ರೌರ್ಯ ನೋವುಗಳನ್ನು ತನ್ನ ಹೆತ್ತ ತಂದೆಯಿಂದ ಅನುಭವಿಸುವ ನಾರಾಯಣ, ಸದಾ ತಂದೆಯಿಂದ 'ನಾಯಿ ಸೂಳೆ ಮಗ, (ನಾಸು) ಎಂದೇ ತಿರಸ್ಕೃತನಾಗುವವನ ವಾಸ್ತವವನ್ನು ಗ್ರಹಿಸಿ ನಿರೂಪಿಸುವ ರೀತಿ ಕನ್ನಡ ಕಾದಂಬರಿ ಸಾಹಿತ್ಯದಲ್ಲೇ ಮೊಟ್ಟ ಮೊದಲಿನದಾಗಿದೆ. ಕೇವಲ ಈ 'ನಾಸು' ಪಾತ್ರವಷ್ಟೇ ಇಂಥದೊಂದು ಹೊಸ ಸೇರ್ಪಡೆ ಆಗಿದ್ದರೆ, ನಾನಿಲ್ಲಿ ಈ ಕಾದಂಬರಿ ಕುರಿತು ಹೆಚ್ಚು ಬರೆಯಬೇಕಿರಲಿಲ್ಲ. ಆದರೆ ಈ ನಾಸುವಿನ ನೆಲೆಯನ್ನು ಸುನಂದಾ ಈ ಸಮಾಜದ ಸ್ತ್ರೀ ಸಮುದಾಯದ ನೆಲೆಯೊಂದಿಗೆ, ಇಲ್ಲಿನ ಕೆಳ ಜಾತಿ ವರ್ಗಗಳ ದುಡಿಮೆಗಾರರೊಂದಿಗೆ ಮತ್ತು ವಿಸ್ತಾರವಾದ ಪ್ರಾಣಿ–ಪಕ್ಷಿ–ಗಿಡ ಮರಗಳ ಪ್ರಕೃತಿಲೋಕದೊಂದಿಗೆ ಬೆಸೆಯುತ್ತಾರೆ ಮತ್ತು ಇಂಥ ವಿಶಾಲವಾದರೂ ತಾತ್ವಿಕವಾಗಿ ಕೇವಲ

"ಕಿರು ಸಂಸ್ಕೃತಿ" ಎಂದೇ ಗುರುತಿಸಲ್ಪಡುತ್ತಿರುವ ಬದುಕಿನ ನೆಲೆಯಿಂದ 'ಮೇಲು' ಅಥವಾ 'ಮುಖ್ಯ' ಸಂಸ್ಕೃತಿಯ ಬದುಕಿನ ಮೌಲ್ಯಗಳ ಅರ್ಥವನ್ನು ಪ್ರಶ್ನಿಸುತ್ತಾರೆ ಎಂಬುದರಿಂದಾಗಿ 'ನಾಸು'ವನ್ನು ಗಮನಾರ್ಹವೆಂದು ಹೇಳುತ್ತಿದ್ದೇನೆ. ಈ ಒರೆಹಚ್ಚಿರುವ ರೀತಿಯಲ್ಲಿ ನನಗೆ ನಾಲ್ಕು ಮುಖ್ಯ ಕ್ರಮಗಳು ತೋರುತ್ತವೆ.

(1) ಅಧೀನರ ಬದುಕಿಗೆ ತನ್ನಷ್ಟಕ್ಕೆ ಇರುವ ಸತ್ವಗಳನ್ನು ಇತ್ಯಾತ್ಮಕವಾಗಿ ಈ ಕಾದಂಬರಿ ದಾಖಲಿಸುತ್ತದೆ. (2) ಪ್ರಚಲಿತ ವ್ಯವಸ್ಥೆಯ ಮಾನದಂಡಗಳಿಂದ ಗೌಣ/ಅಮುಖ್ಯ ಎನಿಸುವ ಬದುಕಿನ ವಿವರಗಳನ್ನು ಸಜೀವ ಭಾಷೆಯಲ್ಲಿ ಹಿಡಿದಿಡುವ ಮೂಲಕ ಅವು ಗೌಣವಲ್ಲ, ನಿಜವಾಗಿ ಅವುಗಳೂ ಒಟ್ಟು ಸಂಸ್ಕೃತಿಯ ಯುಕ್ತ ಅಂಗಗಳೆಂಬುದನ್ನು ಎತ್ತಿಹಿಡಿಯುತ್ತದೆ. (3) ಸ್ಥಾಪಿತ ಸಂಸ್ಕೃತಿಯ ಮೌಲ್ಯ ಕಲ್ಪನೆಯನ್ನು ಅದರೊಳಗಿನ ಶುಷ್ಕತೆ, ಅರ್ಥಹೀನತೆಗಳನ್ನು ವ್ಯಂಗ್ಯದ ಒಳದನಿಯಿಂದ ಬಯಲು ಮಾಡುತ್ತಲೇ, ಪ್ರತಿ ಸಂಸ್ಕೃತಿಯಲ್ಲಿ ಅಂತರ್ಗತವಾಗಿರುವ ಮಾನವೀಯ ಸೆಲೆಯನ್ನು ಎತ್ತಿ, ಬೆಳೆಸಿ, ಮರು ಮೌಲ್ಯಸ್ಥಾಪನೆಗೆ ಯತ್ನಿಸಲಾಗಿದೆ. (4) ಕೇವಲ ಸ್ತ್ರೀಯರ ಪ್ರಪಂಚವೆಂದಷ್ಟೇ ಸೀಮಿತಗೊಳಿಸದೆ, ಒಟ್ಟು ಮಾನವಸ್ತರದಲ್ಲಿ ಸಮಸ್ಯೆಯ ವಿಶ್ಲೇಷಣೆ, ಚರ್ಚೆ ಕೊನೆಗೆ ಪರಿಹಾರ ಕೂಡ ಇಲ್ಲಿ ಧ್ವನಿತವಾಗುತ್ತದೆ.

ಈ ನಾಲ್ಕು ಕ್ರಮಗಳನ್ನು ಇನ್ನಷ್ಟು ವಿವರವಾಗಿ ಗಮನಿಸಬಹುದು.

(1) ಯಜಮಾನರಾದ ಅಗ್ನಿಹೋತ್ರಿ ಅನಂತಾಚಾರ್ಯ, ಬಿಂದಿಗಿ ಹಯಗ್ರೀವಾಚಾರ್ಯ ಮತ್ತು ಉಡುಪಿ ಹೋಟಲಿನ ಜನಾರ್ಧನ ರಾಯರುಗಳ ಚಿಂತನೆ, ಸಾಧನೆ, ಮೌಲ್ಯಕಲ್ಪನೆ, ಅಪರವರ ಅಧಿಕಾರ ನೆಲೆಗಳು. ಸ್ವಪ್ರತಿಷ್ಠೆಗಳು ಅಹಂಕಾರಗಳ ವಿಸ್ತಾರ ನಿರೂಪಣೆ ಈ ಕೃತಿಯಲ್ಲಿದೆ. ಆದರೆ ಇವರ 'ಯಜಮಾನಿಕೆ'ಗೆ ಒಂದಲ್ಲ ಒಂದು ವಿಧದಲ್ಲಿ ಸೇರಿರುವ 'ಅಧೀನ'ರೆನ್ನಬಹುದಾದ ಜನರ ಸಮುದಾಯ ಇವರಿಗಿಂತ ಕಡಿಮೆ ಮುಖ್ಯವಲ್ಲ. ಅನಂತಾಚಾರ್ಯರ ವಿಧವೆ ತಾಯಿ ಅಕ್ಕವ್ವ, ಅವರ ಹೆಂಡತಿ ಪದ್ಮಾವತಿ, ಅವರ ಮಕ್ಕಳಾದ ಅರುಂಧತಿ, ನಾರಾಯಣ, ಅವರ ಆಶ್ರಯದಲ್ಲಿರುವ ವಿಧವೆ ಅಂಬವ್ವ ಅವರುಗಳಿಗೆಲ್ಲ ತಮ್ಮದೇ ಆದ ವಿಶಿಷ್ಟ ವ್ಯಕ್ತಿತ್ವಗಳಿವೆ, ಪ್ರತಿಭೆಗಳಿವೆ, ಚೈತನ್ಯವಿದೆ, ಸೃಜನಶೀಲತೆಯೂ ಇದೆ. ಅದೇ ರೀತಿ ಹಯಗ್ರೀವಾಚಾರ್ಯರ ಕುಟುಂಬದಲ್ಲಿ ಅಧೀನರ ನೆಲೆಯನ್ನು ಸೂಚಿಸುವ ಅವರ ಹೆಂಡತಿ ಸುಬ್ಬಮ್ಮ. ಅವರ ಪ್ರೇಯಸಿ ಚಂದ್ರಾ, ಆಚಾರ್ಯರ ಮಕ್ಕಳಾದ ವಿರಜಾ, ಗೋವಿಂದರದು ಅಧೀನತೆ, ಪಾರತಂತ್ರ್ಯಗಳ ನಡುವೆಯೂ ಸತ್ವರಹಿತವಲ್ಲದ ಅಸ್ತಿತ್ವ' ಇಂಥವರ ಸ್ವಂತಿಕೆಗಳ ಇರವನ್ನು ಇತ್ಯಾತ್ಮಕವಾಗಿ ದಾಖಲಿಸುತ್ತ 'ನಾಸು'-ಏಕೆ ಯಜಮಾನ ಸಂಸ್ಕೃತಿ ಈ ಜನರ ಇರವನ್ನು ಗೌಣವಾಗಿಸಿದೆ-ಎಂಬುದನ್ನು ಪ್ರಶ್ನಿಸಿಕೊಳ್ಳುವಂತೆ ಓದುಗರನ್ನು ಪ್ರೇರೇಪಿಸಬಲ್ಲದು.

2) ಈ ಅಧೀನರ ಬದುಕಿನ ಅಸ್ತಿತ್ವ ಅಥವಾ ಇರವೂ ಮುಖ್ಯವೆಂಬುದನ್ನು ಸ್ಥಾಪಿಸುವ ವಿಧಾನ ಯಾವುದು? ಇವರೆಲ್ಲರ ದಿನದಿನದ ಕೇವಲ ರೂಢಿಗತವೇ ಆದರೂ, ಆ ಬದುಕಿನ ವಿವರಗಳನ್ನು ಸಜೀವವಾಗಿಸಿ ಚಿತ್ರಿಸಿರುವುದು ಇಂಥ ಒಂದು ವಿಧಾನವೆನ್ನಬಹುದು. ಹೆಂಗಸರು ಬೆಟ್ಟ ಬೆಳಿಗ್ಗೆ ಎದ್ದು ರಂಗವಲ್ಲಿ ಇಕ್ಕುವ ಇಲ್ಲವೆ ದಿನದ ಕೊಟ್ಟಿಗೆ ತೊಳೆದು ಹಾಲು ಕರೆವ ವಿವರವಾಗಿರಬಹುದು. ನಾಣಿ ಬಾವಿಯಿಂದ ನೀರು ಸೇದುವ ವಿವರವಾಗಬಹುದು, ವರಲಕ್ಷ್ಮಿ ವ್ರತದ ಒಡವೆ, ಸೀರೆ, ಮಡಿ, ಧಾರ್ಮಿಕ ಪೂಜಾದಿ ವಿಧಾನಗಳ ವಿವರವಿರಬಹುದು, ಅಥವಾ ಕೆಲಸದ ಆಳು ಸೌದೆ ಕಡಿವ ವಿವರವಿರಬಹುದು, ಪ್ರತಿಯೊಂದೂ ಆಯಾ ವ್ಯಕ್ತಿಗಳ ಸಹಜವಾದ ಸಂಕಟ, ಸಂತಸ, ಯಾತನೆ ಹಿಗ್ಗುಗಳ ಉಸಿರಾಟದ ಗತಿಯೊಂದಿಗೇ ದಾಖಲಾಗುತ್ತವೆ. ಈ ವಿವರಗಳಲ್ಲಿ ಅವರ ಮಾನವೀಯ ತಾಕಲಾಟಗಳಿವೆ. ಉದಾಹರಣೆಗೆ ಪದ್ಮಾವತಿ-ಮನೆತನದ ದೊಡ್ಡವ್ರತವಾದ ವರಲಕ್ಷ್ಮಿ ಪೂಜೆಯ ದಿನ ಅಲಂಕರಿಸಿಕೊಳ್ಳುವ ಪೂಜೆಯ ಸಿದ್ಧತೆಗಳನ್ನು ಮಾಡುವ, ಅಡುಗೆ ಮಾಡುವ ಕೊನೆಗೆ ರಾತ್ರಿ ಗಂಡನಿಂದ ಅತ್ಯಾಚಾರಕ್ಕೆ ಒಳಗಾಗುವವರೆಗಿನ ಎಲ್ಲ ವಿವರಗಳಲ್ಲಿ ಆಕೆಯ ಅಂತರಂಗದ ಬದುಕಿನ ವ್ಯಾಖ್ಯಾನ ಬರೆತುಕೊಳ್ಳುತ್ತದೆ. ಅದೇ ರೀತಿ ಸುಬ್ಬಮ್ಮ ತನ್ನ ಪತಿ ಹಯಗ್ರೀವಚಾರ್ಯರು ಇಟ್ಟುಕೊಂಡ ಚಂದ್ರಾ ಗರ್ಭಿಣಿಯಾದಾಗ ಆಕೆಯನ್ನು ನಡೆಸಿಕೊಳ್ಳುವ ರೀತಿಯಲ್ಲಿ ಔದಾರ್ಯ, ಸಂಕಟ ಎರಡೂ ಜೊತೆಗೂಡಿರುವುದನ್ನು ಸೂಕ್ಷ್ಮವಾಗಿ ಕೃತಿ ದಾಖಲಿಸುತ್ತದೆ. ಹೀಗೆ ನೂರಾರು ರೀತಿಯಲ್ಲಿ ನೋವಿಗೊಳಗಾದವರ ನೆಲೆಗಳನ್ನು ಗುರುತಿಸುತ್ತಲೇ ಬದುಕಿನಲ್ಲಿ ಅವರೂ ಸುಖದ ಗಳಿಗೆಗಳನ್ನು ಹೇಗೆ ಸೃಷ್ಟಿಸಬಲ್ಲರೆಂಬುದನ್ನೂ 'ನಾಸು' ಗುರುತಿಸುತ್ತವೆ.

3) ಹತ್ತಿಕ್ಕಲ್ಪಟ್ಟವರ, ಅಂಚಿಗೆ ಒತ್ತರಿಸಲ್ಪಟ್ಟವರ ಬದುಕಿನ ದ್ರವ್ಯವನ್ನು ಪ್ರಧಾನ ಸಂಸ್ಕೃತಿಯ ನಿರೀಕ್ಷಿತ ಮೌಲ್ಯಗಳಿಗೆ ಪ್ರತಿಯಾಗಿ ಹೀಗೆ ದಾಖಲಿಸಿರುವುದರಿಂದ 'ನಾಸು'ವಿನಲ್ಲಿ ಉದ್ದಕ್ಕೂ ವಿಶಿಷ್ಟವಾದ, ಸಂಕೀರ್ಣವಾದ ಮೌಲ್ಯಗಳ ತಾಕಲಾಟವನ್ನು ಲೇಖಕಿ ಸೃಷ್ಟಿಸುತ್ತಾರೆ. ಉದಾ : ಯಜಮಾನ ವ್ಯವಸ್ಥೆಯ ಪ್ರಬಲ ಅಂಶಗಳನ್ನು ಪ್ರತಿನಿಧಿಸುವ ಅನಂತಾಚಾರ್ಯ ಹಯಗ್ರೀವಾಚಾರ್ಯರಿಗೆ ತಮ್ಮ ಜಾತಿ, ವಿದ್ವತ್ತು, ಜ್ಞಾನದ ಸಾಮರ್ಥ್ಯದ ಬಗ್ಗೆ ನಿಸ್ಸಂದಿಗ್ಧವಾದ ವಿಶ್ವಾಸ ಇದೆ. ಸಮಾಜದಲ್ಲಿ ಇತರರ ಮೇಲೆ ಇವರು ಹಿಡಿತ ಸಾಧಿಸುವಲ್ಲಿ ಈ ಜ್ಞಾನವೇ ಇವರ ಮುಖ್ಯ ಅಧಿಕಾರದ ನೆಲೆಯಾಗಿದೆ. ಅನೇಕರಿಗೆ ಪಾಠ ಹೇಳಿ ಶಿಷ್ಯರನ್ನು 'ಯಶಸ್ಸಿ'ನತ್ತ ಬೆಳೆಸಿದ ಹೆಮ್ಮೆಯಿರುವ ಅನಂತಾಚಾರ್ಯರು, ತಮ್ಮ ವಿದ್ವತ್ತು, ಜ್ಞಾನಗಳ ದಾಹದ ಮುಂದುವರಿಕೆ, ಮರುಕಳಿಕೆಯನ್ನು ಮಕ್ಕಳಾದ ಅರುಂಧತಿ ವಿಷ್ಣುಗಳಲ್ಲಿ ಗುರುತಿಸಿಕೊಂಡು, ತಮ್ಮದೇ ಅಹಮಿಕೆಯ ವಿಸ್ತೃತ ರೂಪಗಳಾಗಿರುವ ಆ ಮಕ್ಕಳನ್ನು ಪ್ರೀತಿಸಬಲ್ಲವರು. ಹಯಗ್ರೀವಾಚಾರ್ಯರು ತಮ್ಮ ಜ್ಞಾನ ವಿದ್ವತ್ತುಗಳ ಜೊತೆ ಪೌರುಷ, ರಸಿಕತೆಯನ್ನೂ ಅಹಂಕಾರದ ಅಂಶವಾಗಿಸಿಕೊಂಡವರು ಕಟ್ಟಿಗೆ ಮೈಯಿನ ಸಾಧ್ವಿ ಹೆಂಡತಿಗಿಂತ ಸುಂದರ ಕಲಾವಂತೆ ಚಂದ್ರಾಳಲ್ಲಿ ತಮ್ಮ ಪೌರುಷದ ಸಾರ್ಥಕತೆ ಕಂಡು, ಅಹಮಿಕೆಯ ವಿಸ್ತೃತ ರೂಪವಾಗಿ ಆಕೆಯನ್ನು ಗೌರವಿಸಬಲ್ಲರು. ಇತರರ ನೋವು ಯಾವುದೂ ಇವರಿಗೆ ತಲುಪದಷ್ಟು ಶುಷ್ಕರು ಇವರು.

ಇವರ ನೆಲೆಗಳಿಗಿಂತ ತೀರಾ ಭಿನ್ನವಾದ ಅಕ್ಕವ್ವ, ಅಂಬವ್ವ, ಪದ್ಮಾವತಿ, ಸುಬ್ಬವ್ವ ಮತ್ತು ನಾಣಿ ತುಂಬು ಅಂತಃಕರಣದ ದ್ರವ್ಯವುಳ್ಳವರು. ತಮ್ಮ ಅಹಮಿಕೆಯಲ್ಲೇ ಬಂಧಿತರಾಗದೆ ಸುತ್ತಲಿನಲ್ಲಿ ಎಲ್ಲರಿಗೂ ತಮ್ಮ ಅನುಕಂಪ, ಪ್ರೀತಿ ವಿಸ್ತರಿಸಬಲ್ಲವರು. ಇತರರ ನೋವಿಗೆ ಮಿಡಿವ, ಕ್ರಿಯಾಶೀಲರಾಗುವ ಮಾನವೀಯ ನೆಲೆಯಲ್ಲಿ ಬದುಕುವ ಇವರದು ನಿಜವಾದ ಅರ್ಥವುಳ್ಳ ಬದುಕು. ಆದರೆ 'ಯಜಮಾನರ' ದರ್ಪ, ದೌರ್ಜನ್ಯಗಳಡಿ ಇವರು ಅಸಹಾಯಕರಾಗಿ ನೋವುಣ್ಣುವ ಬಗೆಯನ್ನು 'ನಾಸು' ತುಂಬ ಸೂಕ್ಷ್ಮವೂ, ಸಾಂದ್ರವೂ ಆದ ಅನುಭವಗಳ ಮೂಲಕ ದಾಖಲಿಸುತ್ತದೆ.

4. ಇವೆಲ್ಲವೂ ಮುಖ್ಯ ಆದರೆ ಇವುಗಳಷ್ಟೇ ಮುಖ್ಯವಾಗಿ ಓದುಗರನ್ನು ಸೆಳೆಯುವ ಮತ್ತೊಂದು ಅಂಶ 'ನಾಸು'ವಿನಲ್ಲಿದೆ. ಅದು 'ಪೌರುಷ' ಮತ್ತು 'ಸ್ತ್ರೀತ್ವ'ಗಳ ಪರಂಪರಾಗತ ನಂಬಿಕೆಗಳನ್ನು ಅಲುಗಾಡಿಸುವಂಥದು. ಜ್ಞಾನ, ತರ್ಕ, ವಿಚಾರಪರತೆ, ಕ್ರೌರ್ಯ ಹಿಂಸೆಗಳು 'ಪೌರುಷ'ದ ಹೆಸರಿನಲ್ಲೂ 'ಅಂತಃಕರಣ' ಮೃದುತ್ವ, ಸಹನೆ, ಭಾವನಾ ತೀವ್ರತೆ, ಸೌಜನ್ಯಗಳು, 'ಸ್ತ್ರೀತ್ವ'ದ ಹೆಸರಿನಲ್ಲೂ ಧೃವೀಕೃತವಾಗಿ ಪುರುಷ ಗುಣಗಳು, ಸ್ತ್ರೀಗುಣಗಳೆಂದು ಕರೆಸಿಕೊಳ್ಳುತ್ತಾ ಬರುತ್ತಿವೆ. 'ನಾಸು'ವಿನಲ್ಲಿ ಎಲ್ಲರಿಗಿಂತ ಅತಿಹೆಚ್ಚು ನೋವುಣ್ಣುವ ನಾರಾಯಣ, ಪುರುಷದೇಹಿ ಆದರೆ ಮಾನವೀಯ ಅಂತಃಕರಣ ಸಮಗ್ರವಾಗಿ ವಿಕಾಸಗೊಳ್ಳುವ ವ್ಯಕ್ತಿ. ಮತ್ತು ಇವನ ಈ ಸತ್ವವನ್ನು ಕಾದಂಬರಿಯಲ್ಲಿ ಯಾವಾಗಲೂ ಗುರುತಿಸುವವರು ಸ್ತ್ರೀಯರು. ಇವನು ತಾದಾತ್ಮ್ಯಗೊಳ್ಳುವುದು ಸ್ತ್ರೀಯರ ಮತ್ತು ಪ್ರಕೃತಿಯ ಲೋಕದೊಂದಿಗೆ. ಕೃತಿಯ ಕೊನೆಗೆ ತನ್ನ ಅತಿಯಾದ ಅತ್ಯಾವ ಹೇಳನದ ಸ್ಥಿತಿಯಲ್ಲಿ, ಯಜಮಾನರ ಹಂಗು ಕಳಚಿಕೊಂಡು, ಮನೆಬಿಟ್ಟು ಓಡಿಹೋಗಿ ಹೇಗೋ ಸ್ವಲ್ಪ ಕಲಿತು, ತನ್ನದೇ ಆದ ವ್ಯಕ್ತಿತ್ವಗಳಿಸಿಕೊಳ್ಳುವ ನಾಣಿ, ತನ್ನನ್ನು ಹಂಗಿಸಿದ ಹಿರಿಯರೆಲ್ಲರ ಮನಸ್ಸುಗಳ ಪರಿವರ್ತನೆಗೆ ಕೇಂದ್ರವಾಗುವಂತೆಯೇ, ಅಸಹಾಯಕರಾದ ತನ್ನ ತಲೆಮಾರಿನ ಎಲ್ಲ ಎಳೆಯ ಜೀವಗಳ ಬದುಕಿನ ಗೋಜಲನ್ನು ಬಿಡಿಸಿಕೊಳ್ಳಲು ಸಹಾಯಕನೂ ಆಗುತ್ತಾನೆ. ಎಲ್ಲರ ಮನಸ್ಸಿನಲ್ಲಿ ತನ್ನ ಪ್ರೀತಿಯನ್ನು ಸ್ಥಾಪಿಸಿ, ತಾನು ಮಾತ್ರ ಇಲ್ಲವಾಗುತ್ತಾನೆ. ಹೇಗೆ ಸ್ತ್ರೀಯಾತ್ಮಕ ನೆಲೆಯಿಂದ ಆರಂಭವಾಗಿ, ಒಟ್ಟು ಬದುಕಿನ ಮೌಲ್ಯದತ್ತ ಹೊಸ ನೋಟ ಹರಿಸುವ 'ನಾಸು' ಸುನಂದಾ ಅವರ ಮೊದಲ ಕಾದಂಬರಿ ಎಂಬುದೇ ಅಚ್ಚರಿಯ ವಿಷಯ. ಆದ್ದರಿಂದಲೇ ಇನ್ನೂ ಬಹಳಷ್ಟು ಇವರಿಂದ ಬಂದೀತು ಎಂಬ ಆಶೆಯನ್ನು ಹುಟ್ಟಿಸುವಂತಿದೆ. ★

# ಒಂದು ಸುಸಂಗತ ಅತೀತದ ಹುಡುಕಾಟದಲ್ಲಿ....

—ಡಾ|| ವಿಜಯಾ ದಬ್ಬೆ

[1993ರ ಮೇ 31ರಿಂದ ಜೂನ್ 3ರ ವರೆಗೆ ಮೈಸೂರಿನಲ್ಲಿ ಜರುಗಿದ ಮಹಿಳಾ ಅಧ್ಯಯನಗಳನ್ನು ಕುರಿತ 6ನೇ ರಾಷ್ಟ್ರೀಯ ಸಮ್ಮೇಳನದಲ್ಲಿ "ಶ್ರೀಮತಿ ಮಾಧುರಿ ಷಾ" ಅವರ ಸ್ಮರಣಾರ್ಥ ಏರ್ಪಡಿಸಲಾಗಿದ್ದ ಉಪನ್ಯಾಸಕ್ಕಾಗಿ ಶ್ರೀಮತಿ ಡಾ|| ವಿಜಯಾದಬ್ಬೆ ಯವರು ಮಂಡಿಸಿದ್ದ ಆಂಗ್ಲ ಪ್ರಬಂಧದ ಸಂಗ್ರಹಾನುವಾದ ಇದು. ಚರ್ಚೆಗೆ ಅರ್ಹವಾದ ಅನೇಕ ವಿಚಾರಗಳನ್ನು ಲೇಖಕಿ ಈ ಪ್ರಬಂಧದಲ್ಲಿ ಪ್ರತಿಪಾದಿಸಿದ್ದು ಆ ವಿಚಾರಗಳ ಸತ್ವಗೆಡದಂತೆ ಹಿಡಿದಿಡುವ ಪ್ರಯತ್ನವನ್ನು ಇಲ್ಲಿ ನಡೆಸಲಾಗಿದೆ. ಇಲ್ಲಿನ ವಿಚಾರಗಳ ಬಗ್ಗೆ ಅಚಲದ ಓದುಗರಿಂದ ಮುಕ್ತ ಪ್ರತಿಕ್ರಿಯೆಗಳನ್ನು ಆಹ್ವಾನಿಸುತ್ತಿದ್ದೇವೆ —ಸಂ]

ಭಾರತೀಯ ಸಮಾಜ ಆಧುನಿಕ ಪಾಶ್ಚಾತ್ಯ ಸಮಾಜದಂತೆ ಏಕರೂಪದ್ದಾಗಿಲ್ಲ. ಇಲ್ಲಿನ ಸಂಸ್ಕೃತಿ ಬಹುರೂಪಿಯಾದದ್ದು. ಈ ಸಂಸ್ಕೃತಿಯಲ್ಲಿನ ಸ್ತ್ರೀಯರ ಇಂದಿನ ಪರಿಸ್ಥಿತಿ ಹಲವು ಬಗೆಯ ಗೊಂದಲಕರ, ಅಸಂಗತ ಹಾಗೂ ಪರಸ್ಪರ ವಿರುದ್ಧವೆನ್ನಬಹುದಾದ ಅಂಶಗಳಿಂದ ಕೂಡಿದೆ. ವ್ಯವಸ್ಥೆಯ ಮೂಲದಿಂದ ಚಾರಿತ್ರಿಕವಾಗಿ ರೂಢವಾಗಿರುವ ಸ್ತ್ರೀಯರನ್ನು ಕುರಿತ ಕ್ರೌರ್ಯ, ಹಿಂಸೆಗಳು ಒಂದು ಕಡೆ ಸಾಂಸ್ಕೃತಿಕ ಆಚರಣೆಗಳಲ್ಲಿ ಅಭಿವ್ಯಕ್ತಿ ಪಡೆಯುತ್ತಿದ್ದರೆ ಮತ್ತೊಂದೆಡೆ ಭಾರತದ ಸಂಸ್ಕೃತಿ ಮೂಲಭೂತವಾಗಿ ಮಾತೃಕೇಂದ್ರಿತವಾದದ್ದೆಂದು ಗುರುತಿಸುವ ಇತಿಹಾಸಕಾರರು ಹೇಳುವಂತೆ 'ಭಾರತೀಯ ಮನಸ್ಸಿನ ಪರಮಾಧಿಕಾರ ಸ್ತ್ರೀಯಾತ್ಮಕ ನೆಲೆಯದು' ಎಂಬಂಥ ಚಿಂತನೆಗಳಿವೆ. ಇದರಿಂದ ಭಾರತೀಯ ಮಹಿಳೆಯರ ಸಾಂಸ್ಕೃತಿಕ ಹಿನ್ನೆಲೆಗಳೇ ವಿಭಿನ್ನ ರೀತಿಯದಾಗಿದ್ದು, ಆಯಾ ಹಿನ್ನೆಲೆಗಳ ಜೊತೆಯಲ್ಲಿಯೇ ಅವರ ಸ್ಥಿತಿಗಳನ್ನು ಗ್ರಹಿಸಬೇಕಾಗುತ್ತದೆ.

ಅನೇಕ ಒಳತೋಟಿಗಳು, ವೈರುದ್ಧ್ಯಗಳು, ಧನಾತ್ಮಕ ಮತ್ತು ನೇತ್ಯಾತ್ಮಕ ಅಂಶಗಳಿಂದ ಕೂಡಿರುವ ಭಾರತೀಯ ಸಮಾಜದಲ್ಲಿ ಪಿತೃಪ್ರಧಾನ ವ್ಯವಸ್ಥೆಯು ಎಲ್ಲಾ ಕಡೆಗಳಲ್ಲೂ ಒಂದೇ ವಿಧವಾಗಿ ಸಮಾನ, ಸ್ಪಷ್ಟ ರೂಪದಲ್ಲಿ ಇದೆ ಎನ್ನಲು ಸಾಧ್ಯವಿಲ್ಲ. ವೈದಿಕ ಪರಂಪರೆ ಪ್ರಧಾನವಾಗಿರುವ ಕಡೆ ಪಿತೃಪ್ರಧಾನ ವ್ಯವಸ್ಥೆಯೇ ಬಲು ಬಲವಾಗಿದೆ. ಆದರೆ ಅವೈದಿಕ ಪರಂಪರೆಯಲ್ಲಿ, ಮತ್ತು ಕೆಲವಡೆ ವೈದಿಕ ಪರಂಪರೆಯಲ್ಲೂ ಪಿತೃ ಪ್ರಧಾನವಲ್ಲದ ಸಾಮಾಜಿಕ ಸ್ವರೂಪ ಇಂದಿಗೂ ಉಳಿದು ಬಂದಿದೆ. ವೈದಿಕ–ಅವೈದಿಕಗಳ ಈ ಸಾಂಸ್ಕೃತಿಕ ಸಂಕೀರ್ಣದಲ್ಲಿ ಎಲ್ಲ ಭಾರತೀಯ ಮಹಿಳೆಯರ ಸ್ಥಿತಿಗಳನ್ನೂ ಕುರಿತಂತೆ ಒಂದೇ ಪರಿಭಾಷೆಯಲ್ಲಿ ಮಾತನಾಡುವುದು ಕಷ್ಟದ ಸಂಗತಿ. ಏಕೆಂದರೆ ಇಂಥ ಏಕರೂಪದ್ದಾದ ಪರಿಭಾಷೆಯೊಂದು ಇದೆಯೆ ಎಂಬುದೇ ಮುಖ್ಯ ಪ್ರಶ್ನೆಯಾಗಿದೆ.

'ಭಾರತೀಯ ಮಹಿಳೆ'ಯರನ್ನು ಕುರಿತು ಈವರೆಗೆ ಬಹಳ ಜನ ಬರೆದಿದ್ದಾರೆ. ಆದರೆ ಅವರ ಬರಹಗಳು ಮಹಿಳೆಯರ ಶೋಷಣೆಯ ಮೇಲೆ ಕೇಂದ್ರೀಕೃತವಾಗಿರುವುದೇ ಹೆಚ್ಚು. ನಮ್ಮ ವರ್ತಮಾನದ ಅನೇಕ ಜ್ವಲಂತ ಸಮಸ್ಯೆಗಳು ಶತ ಶತಮಾನಗಳಿಂದ ಬೆಳೆದುಬಂದ ಶೋಷಕ ವ್ಯವಸ್ಥೆಯ ಪ್ರಭಾವದಿಂದ ಹುಟ್ಟಿದವು ಎಂಬ ವಾಸ್ತವಾಂಶಕ್ಕೆ ನಾವು ಕಣ್ಣು ಮುಚ್ಚಿಕೊಳ್ಳಬೇಕಿಲ್ಲ. ಆದರೆ ಬದಲಾವಣೆಯ ಪ್ರಕ್ರಿಯೆ ಮತ್ತು ಉತ್ತಮ ಭವಿಷ್ಯದ ನಿರೀಕ್ಷೆಗಳು ನಮ್ಮ ಅತೀತ, ವರ್ತಮಾನಗಳ ಎರಡರ ವ್ಯಾಪಕ ಅರಿವನ್ನು ಬಯಸುತ್ತವೆ. ನಮ್ಮ ಸಾಂಸ್ಕೃತಿಕ ಅತೀತದಲ್ಲಿ ಇವತ್ತಿನ ಸ್ತ್ರೀಯರು ಒಪ್ಪಿ, ಅನುಸರಿಸಬಹುದಾದ ಇತ್ಯಾತ್ಮಕ ಮಾದರಿಗಳು ಇವೆಯೆ ಎಂಬುದನ್ನು ತಿಳಿಯಬೇಕಾದ್ದು ಇಂದು ಬಹು ಅಗತ್ಯ. ಇಂಥ ಇತ್ಯಾತ್ಮಕ ಮಾದರಿಗಳಿಗಾಗಿ ನಾವು ವೈದಿಕ ಪರಂಪರೆಯ ಧಾರ್ಮಿಕ ವಿಧಿಗಳ ಹಿಂದೆ ಹೋದರೆ ಅವು ನಮ್ಮನ್ನು ಬಹುದೂರ ಕೊಂಡೊಯ್ಯಲಾರವು. ಅದಕ್ಕಾಗಿ ನಾವು ಅವೈದಿಕ ಸಂಸ್ಕೃತಿಗಳತ್ತ ನೋಟಹರಿಸಬೇಕಾಗು

ತ್ತದೆ. ನಮ್ಮ ಸಂಸ್ಕೃತಿಯಲ್ಲಿನ ಅವೈದಿಕ ಪ್ರಭಾವಗಳು ಎನ್ನುವಲ್ಲಿ ಶೈವಧರ್ಮ, ಶಾಕ್ತಧರ್ಮ (ತಾಂತ್ರಿಕ ಧರ್ಮ), ಜೈನ ಮತ್ತು ಬೌದ್ಧ ಪರಂಪರೆಗಳು, ಪ್ರಾದೇಶಿಕ ಅಥವಾ ಬುಡಕಟ್ಟು ಮೂಲವಾದ ಕಿರು ಸಂಸ್ಕೃತಿಗಳನ್ನು ಈ ದೃಷ್ಟಿಯಿಂದ ಶೋಧಿಸಬೇಕಾಗುತ್ತದೆ.

## ದಕ್ಷಿಣ ಭಾರತದ ವೈಶಿಷ್ಟ್ಯತೆ

ಸಮಗ್ರ ಭಾರತದ ಸಾಂಸ್ಕೃತಿಕ ಲಕ್ಷಣಗಳೊಂದಿಗೆ ಹೋಲಿಕೆ ಪಡೆದಿದ್ದರೂ ದಕ್ಷಿಣ ಭಾರತದ ಸಾಂಸ್ಕೃತಿಕ ಚರಿತ್ರೆ ಸ್ಪಷ್ಟವಾದ ವಿಭಿನ್ನ ಸ್ವರೂಪವುಳ್ಳದ್ದು. ಇಲ್ಲಿನ ಶಾಸನಗಳು, ಕಲೆ, ಶಿಲ್ಪ, ಜಾನಪದ ಸಾಹಿತ್ಯ, ಧಾರ್ಮಿಕ ಚಳವಳಿಗಳು ಈ ವಿಶಿಷ್ಟ ಲಕ್ಷಣಗಳ ದ್ಯೋತಕವಾಗಿವೆ. ಆ ಕೆಲವು ವೈಶಿಷ್ಟ್ಯಗಳನ್ನು ಉದಾಹರಿಸಬಹುದು : ಶೈವಧರ್ಮ ದಕ್ಷಿಣಭಾರತದಲ್ಲಿ ದೃಢವಾಗಿ ಬೇರೂರಿತ್ತು. ಬಂಗಾಳ, ಆಸ್ಸಾಂಗಳ ಜೊತೆಗೆ ದಕ್ಷಿಣ ಭಾರತದ ಕೆಲವು ಸ್ಥಳಗಳು ಶಾಕ್ತಪಂಥಗಳ ಕೇಂದ್ರಗಳಾಗಿದ್ದವು. ಮಾತೃಪ್ರಧಾನ, ಮಾತೃಸಂತಾನ ಮತ್ತು ಮಾತೃಕೇಂದ್ರಿತ ಸಂಸ್ಕೃತಿಗಳು ದಕ್ಷಿಣ ಭಾರತದಲ್ಲಿ ಇದ್ದವು. ಇಲ್ಲಿನ ಭಾಷೆಗಳು ದ್ರಾವಿಡ ಭಾಷಾ ಕುಟುಂಬಕ್ಕೆ ಸೇರಿವೆ.... ಈ ಭಿನ್ನತೆಗಳ ಪಟ್ಟಿ ಬೆಳೆಸಬಹುದು.

ದಕ್ಷಿಣ ಭಾರತದ ಈ ವಿಶಿಷ್ಟ ಸಾಂಸ್ಕೃತಿಕ ಪರಂಪರೆಯಲ್ಲಿ ಕರ್ನಾಟಕವೂ ಪಾಲುಹೊಂದಿರುವುದರಿಂದ, ಇಲ್ಲಿ ಸಮೃದ್ಧವಾಗಿ ದೊರೆಯುವ ಸಾಮಗ್ರಿಗಳ ಮೂಲಕ ನಮ್ಮ ಅತೀತದಿಂದ ಸುಸಂಗತವೆನ್ನಬಹುದಾದ ಸಾಂಸ್ಕೃತಿಕ ಹಿನ್ನೆಲೆಯನ್ನು ಹುಡುಕಲು ಸಾಧ್ಯ. ಪ್ರಸ್ತುತ ಇಲ್ಲಿ ಅಂಥ ಒಂದು ಕಿರುಯತ್ನವನ್ನು ಮಾಡಲಾಗಿದೆ.

## ಶೈವಧರ್ಮ

ಶೈವಧರ್ಮದ ಅನೇಕ ಪಂಥಗಳು ಕರ್ನಾಟಕದ ಸಾಂಸ್ಕೃತಿಕ ಬದುಕನ್ನು ಗಾಢವಾಗಿ ಪ್ರಭಾವಿಸಿದ್ದವು. ಕ್ರಿ. ಶ. 12ನೆಯ ಶತಮಾನದವರೆಗೂ ಇಲ್ಲಿ ಲಾಕುಲೀಶ, ಪಾಶುಪತ, ಕಾಳಾಮುಖ, ಲಾಕುಲ ಮುಂತಾದ ಶೈವ ಪಂಥಗಳು ಪ್ರಭಾವ ಬೀರಿದ್ದವು. ಕೌಲ, ಕಾಪಾಲಿಕ ಪಂಥಗಳಲ್ಲಿ ಸ್ತ್ರೀಯರ ಬಗ್ಗೆ ನೇತ್ಯಾತ್ಮಕ ದೃಷ್ಟಿಕೋನ ವಿರಲಿಲ್ಲ. ಶೈವರಲ್ಲಿ ಗೌರವಾನ್ವಿತರಾದ ವಿದ್ಯಾವತಿಯರಾದ ಸ್ತ್ರೀಯರು, ಸಂನ್ಯಾಸಿನಿಯರು ಇದ್ದರು. ಇಂಥವರಲ್ಲಿ ದೇವಬ್ಬೆ ಗೌರವಿ, ಗಂಗಜ್ಜಿ, ಅಕ್ಕಾದೇವಿ ಮುಂತಾದವರು ಹೀಗೆ ಮಾನ್ಯತೆಗಳಿಸಿದ್ದ ದಾಖಲೆಗಳಿವೆ.

ಹನ್ನೆರಡನೆಯ ಶತಮಾನದಲ್ಲಿ ಸಂಭವಿಸಿದ ವೀರಶೈವ ಚಳವಳಿಯು ಮುಖ್ಯವಾಗಿ ಆತ್ಮವು ಹೆಣ್ಣೂ ಅಲ್ಲ, ಗಂಡೂ ಅಲ್ಲ ಎಂಬ ತಾತ್ವಿಕ ನೆಲೆಯನ್ನು ಹೊಂದಿತ್ತು. ಇದರಿಂದ ಆ ಚಳವಳಿ ಸೃಷ್ಟಿಸಿದ್ದ ಅನುಕೂಲಕರ ಪರಿಸರದಲ್ಲಿ ಸ್ತ್ರೀಯರು ಬೌದ್ಧಿಕ, ಆಧ್ಯಾತ್ಮಿಕ ಕ್ಷೇತ್ರಗಳಲ್ಲಿ ಹೆಚ್ಚಿನ ಸಾಧನೆ ಮಾಡಲು ಅವಕಾಶ ದೊರೆತಿತ್ತು. ಅಕ್ಕಮಹಾದೇವಿ ಆ ಪರಿಸರದಲ್ಲಿ ತನ್ನ ಮದುವೆಯ ಚೌಕಟ್ಟು ಕಿತ್ತೊಗೆದು ನಡೆದದ್ದು ಸಾಧ್ಯವಾದದ್ದಷ್ಟೇ ಅಲ್ಲ, ಧಾರ್ಮಿಕವಾಗಿ ಅದಕ್ಕೆ ಮನ್ನಣೆಯೂ ದೊರೆಯಿತು. ಸೂಳೆ ಸಂಕವ್ವೆ ಹೊಲೆಯುವ ಕಾಯಕದ ರೇವವ್ವೆಯರಂಥ ಸಾಮಾನ್ಯರಿಂದ ಹಿಡಿದು ಸುಮಾರು 30ಜನ ಸ್ತ್ರೀಯರು ಕಾವ್ಯದ ಮೂಲಕ ತಮ್ಮನ್ನು ಅಭಿವ್ಯಕ್ತಿಗೊಳಿಸಿಕೊಳ್ಳುವುದು ಆಗ ಸಾಧ್ಯವಾಗಿತ್ತು. ತಮ್ಮ ಕಾಲದ ಪುರುಷರಿಂದ ಇವರು ಗೌರವ, ಆದರಗಳನ್ನು ಪಡೆದಿದ್ದರಲ್ಲದೆ ಅಕ್ಕನಂಥವರು ಮುಂದಿನ ಕವಿಗಳ ಕಾವ್ಯಗಳಿಗೆ ಕೇಂದ್ರ ವ್ಯಕ್ತಿಗಳೂ ಆದರು.

ಪಿತೃಪ್ರಧಾನ ವ್ಯವಸ್ಥೆಯ ಚೌಕಟ್ಟನ್ನು ಈ ಅಲ್ಪಾಯುಷಿಯಾಗಿದ್ದ ವೀರಶೈವ ಚಳವಳಿಯು ಬದಲಾಯಿಸಲು ಸಮರ್ಥವಾಗಿರಲಿಲ್ಲ. ಅಕ್ಕನಂಥವರು ಇಂದಿನ ಸಾಂಸಾರಿಕ ಆಸಕ್ತಿಯುಳ್ಳ ಸಾಮಾನ್ಯ ಮಹಿಳೆಯರಿಗೆ ಮಾದರಿಯೂ ಆಗಲಾರರು. ಇಂದು ವೀರಶೈವ ಸಮುದಾಯ ಆ ಚಾರಿತ್ರಿಕ ಹಂತದ ಎಲ್ಲ ಚಲನಶೀಲತೆ ಕಳೆದುಕೊಂಡು, ತನ್ನ ಸುತ್ತಲಿನ ಇತರ ಸಾಂಸ್ಕೃತಿಕ ಸಮೂಹಗಳಷ್ಟೇ ಪಿತೃಪ್ರಧಾನ ವ್ಯವಸ್ಥೆಯ ಅಂಗವಾಗಿದೆ ಎಂಬುದೂ ನಿಜ. ಆದರೆ ಈ ಧಾರ್ಮಿಕ ಪರಂಪರೆಯಲ್ಲಿ ಒಮ್ಮೆ ಉನ್ನತಿಗೇರಿದ್ದ ಸ್ತ್ರೀಯರ ನೆಲೆಯ ಪ್ರಭಾವವನ್ನು ಇಂದಿಗೂ ಸ್ವಲ್ಪ ಗುರುತಿಸಬಹುದಾಗಿದೆ. ಸನ್ಯಾಸಿನಿಯೊಬ್ಬರ ನೇತೃತ್ವದಲ್ಲಿ ಮಠವೊಂದರ ಅಸ್ತಿತ್ವ, ರಾಜಕೀಯ ಕ್ಷೇತ್ರದಲ್ಲಿ ಈ ಹಿನ್ನೆಲೆಯ ಮಹಿಳೆಯರ ಕಾರ್ಯಶೀಲತೆ, ಆಧುನಿಕ ಕನ್ನಡ ಸಾಹಿತ್ಯದಲ್ಲಿ ಈ ಸ್ತ್ರೀಯರ ಸಾಧನೆಗಳನ್ನು ಗಮನಿಸಿದರೆ, ಧಾರ್ಮಿಕ ನೆಲೆಯಲ್ಲಿ ಸ್ತ್ರೀಯರ ಸಾಧನೆಗಳಿಗೆ ಈ ಪರಂಪರೆಯಲ್ಲಿ ಅಷ್ಟು ತೊಡಕುಗಳಿಲ್ಲ ಎನ್ನುವುದನ್ನು ಗುರುತಿಸಲು ಸಾಧ್ಯ. ಈ ಪರಂಪರೆಯಲ್ಲಿ ಸ್ತ್ರೀಯರನ್ನು ಶೋಷಿಸುವ ಅಂಶಗಳು

ತುಲನಾತ್ಮಕವಾಗಿ ಕಡಿಮೆಯಿದೆ ಎಂಬುದರ ಕುರುಹು ಇದೆಂದು ಭಾವಿಸಬಹುದು.

### ಯಕ್ಷಿ–ಆರಾಧನೆ

ಜೈನ ಧಾರ್ಮಿಕ ಪರಂಪರೆ ಕರ್ನಾಟಕದಲ್ಲಿ ಬಹು ಬಲವಾದ ಪ್ರಭಾವ ಬೀರಿದೆ. ಅದರಲ್ಲೂ ಜೈನ ದಿಗಂಬರ ಪಂಥವು ಬಲವಾಗಿ ರೂಢಿಸಿದ್ದು ಕರ್ನಾಟಕ ದಲ್ಲಿಯೇ. ಈ ಧಾರ್ಮಿಕ ಪರಂಪರೆಯಲ್ಲಿ ತೀರ್ಥಂಕರರ ರಕ್ಷಕಿಯರಾದ ಆರಾಧನೆ ಇಲ್ಲಿ ಹೆಚ್ಚು ಪ್ರಸ್ತುತ ವಾದದ್ದು. ಧಾರ್ಮಿಕ ನೆಲೆಯಲ್ಲಿ ಯಕ್ಷಿಯರ ಸ್ಥಾನ ತೀರ್ಥಕರರದ್ದಕ್ಕಿಂತ ಕೆಳಗಿನದು. ಆದರೆ ಸಾಮಾನ್ಯ ಭಕ್ತರಿಗೆ ಈ ವ್ಯತ್ಯಾಸ ತುಂಬ ಮುಖ್ಯವಾಗದು. ದಿನ ನಿತ್ಯದ ಸಾಂಸಾರಿಕ ಬದುಕಿನ ಕಷ್ಟ ಕೋಟಲೆಗಳಿಂದ ಪಾರುಮಾಡುವ ಅನುಗ್ರಹ ದೇವಿಯರಾಗಿ ಯಕ್ಷಿಯರಿಗೆ ತುಂಬ ಪ್ರಮುಖ ಸ್ಥಾನವನ್ನು ಈ ಧಾರ್ಮಿಕ ಆಚರಣೆ ಗಳಲ್ಲಿ ನೀಡಲಾಗಿದೆ. ಪದ್ಮಾವತಿ, ಜ್ವಾಲಾಮಾಲಿನಿ, ಕೂಷ್ಮಾಂಡಿನಿ ಮುಂತಾದ ಈ ಯಕ್ಷಿಯರು ಪಿತೃಪ್ರಧಾನ ವ್ಯವಸ್ಥೆಯ ಛಾಳಾದ ಲಕ್ಷಣವುಳ್ಳ ದಿಗಂಬರ ಪಂಥದಲ್ಲಿ ಈ ರೀತಿ ಆದ್ಯತೆ ಗಳಿಸಿರುವುದು ಮಹತ್ವದ ಸಂಗತಿ· ಪುರುಷ ದೇಹದಲ್ಲಿ ಮಾತ್ರವೇ ಮುಕ್ತಿ ಸಾಧ್ಯ ಎಂದು ನಂಬುವ ದಿಗಂಬರ ಪಂಥದ ಆರು ಮಠಗಳು ಕರ್ನಾಟಕ ದಲ್ಲಿದ್ದು, ಇವುಗಳಲ್ಲಿ ಮೂರು, ಯಕ್ಷಿಯರ ಆರಾಧನಾ ಕೇಂದ್ರದಲ್ಲೇ ಇರುವುದನ್ನು ಗಮನಿಸಬೇಕು. ಈ ದೇವಿಯರು ಜೈನ ಸಮುದಾಯಕ್ಕಷ್ಟೇ ಅಲ್ಲ, ಜೈನೇತರ ರಿಗೂ ಪೂಜಾರ್ಹರೆನಿಸಿದ್ದಾರೆ. ಆದರೆ ತೀರ್ಥಂಕರರ ಬಗ್ಗೆ ಇಂಥ ಸಮಾನ ಆದರವಿಲ್ಲ. ಇದಕ್ಕೆ ಹಲವು ಕಾರಣಗಳಿರಬಹುದು. ಈ ಯಕ್ಷಿಯರು ಕರ್ನಾಟಕದಲ್ಲಿ ಜೈನಧರ್ಮದ ಸಂಬಂಧ ಪಡೆದಿದ್ದ ಹಲವು ರಾಜ ಮನೆತನಗಳಿಗೆ ಕುಲದೇವಿಯರೂ ಆಗಿದ್ದವರು. ಇವರು ಸ್ಥಳೀಯ ಮೂಲದ ಮಾತೃದೇವತೆಗಳ ರೂಪಾಂತರ ಆಗಿರುವುದೂ ಸಾಧ್ಯ. ಒಟ್ಟಿನಲ್ಲಿ ಜೈನ ಸಂಸ್ಕೃತಿಯ ಸ್ತ್ರೀಯಾತ್ಮಕ ಅಭಿವ್ಯಕ್ತಿ ತತ್ವಗಳಂತಿರುವ ಈ ಯಕ್ಷಿಯರ ಮೂಲಕ ಸಾಮಾನ್ಯ ಮಹಿಳೆಯರು ಒಂದು ರೀತಿಯ ತಾದಾತ್ಮ್ಯದಿಂದ ಹೆಚ್ಚಿನ ಆತ್ಮವಿಶ್ವಾಸಗಳಿಸಬಹುದು.

### ಸಿರಿ ಆರಾಧನೆ

ಕರಾವಳಿ ಕರ್ನಾಟಕಕ್ಕೆ ತನ್ನದೇ ವಿಶಿಷ್ಟವಾದ ಸಾಂಸ್ಕೃತಿಕ ಚರಿತ್ರೆಯಿದೆ. ಇಲ್ಲಿನ ಬ್ರಾಹ್ಮಣೇತರ ಜಾತಿ ಗಳಲ್ಲಿ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಇಂದಿಗೂ ರೂಢಿಯಲ್ಲಿದೆ. ಈ ಜನರು 'ಸಿರಿ' ದೇವಿಯನ್ನು ತಮ್ಮ ವ್ಯವಸ್ಥೆಯ ಆದಿ ಮಹಿಳೆ ಎಂದು ಗೌರವಿಸಿ ಪೂಜಿಸು ತ್ತಾರೆ. ಇಲ್ಲಿನ ಆರು ದೇವಾಲಯಗಳಲ್ಲಿ ವರ್ಷಕ್ಕೊಮ್ಮೆ 'ಸಿರಿ' ಉತ್ಸವವನ್ನು ನಡೆಸುತ್ತಾರೆ. ಈ ದೇವಾಲಯ ಗಳು ಮುಖ್ಯ ಸಂಸ್ಕೃತಿಯ ವಾಹಿನಿಗೆ ಸೇರಿ ಹೋಗಿ ದ್ದರೂ ಮೂಲದಲ್ಲಿ ಇವು ದ್ರಾವಿಡ ದೇವಾಲಯ ಗಳು.

'ಸಿರಿ'ಯ ಕಥೆಯನ್ನೇ ಸಾರುವ ತುಳು ಪಾಡ್ದನ ಗಳು ಆಕೆಯ ವೈವಾಹಿಕ ಬದುಕಿನ ಕಷ್ಟ, ತಾಪಗಳನ್ನು ವರ್ಣಿಸುತ್ತವೆ. ಅನೇಕ ಬಗೆಯ ದೌರ್ಜನ್ಯ, ಸಂಕಟ ಗಳು ಆಕೆಗೆ ಎದುರಾದಾಗ, ಆಕೆಯ ತವರು ಮನೆಯ ಬಾಗಿಲು ಸದಾ ಆಕೆಗೆ ತೆರೆದಿದ್ದು, ಅಲ್ಲಿಂದ ಯಾವಾಗಲೂ ಆಸರೆ, ಬೆಂಬಲಗಳನ್ನು ಆಕೆ ಪಡೆದುಕೊಳ್ಳುತ್ತಾಳೆ. ತನ್ನ ಗಂಡನ ಕ್ರೂರ ನಡವಳಿಕೆಗಳಿಂದಾಗಿ ಮನೆ ಬಿಟ್ಟು ಹೋಗಲು, ಸ್ವತಂತ್ರವಾಗಿ ಮದುವೆಯ ಆಯ್ಕೆ ಮಾಡಲು ಈಕೆಗೆ ಸಾಧ್ಯವಾಗುತ್ತದೆ. ತಾಯಿ–ಮಗಳು –ಮೊಮ್ಮಗಳು–ಹೀಗೆ ಮೂರು ತಲೆಮಾರುಗಳ ಮಾತೃ ಪ್ರಧಾನ ವ್ಯವಸ್ಥೆಯ ಕಥೆಯನ್ನು ಈ ಸಿರಿಯ ಕಥೆ ನಿರೂಪಿಸುತ್ತದೆ. ಇದರಲ್ಲಿ ಸಿರಿಯ ಬದುಕು ದುಃಖ ಗಳ ಜೊತೆಯಲ್ಲೇ ಯಶಸ್ಸಿನ ಮಾದರಿಯನ್ನೂ ಒಳ ಗೊಂಡಿದೆ.

'ಅಳಿಯ ಸಂತಾನ'ದ ಕುಟುಂಬ ಪದ್ಧತಿ ಆಚರಿ ಸುವ ಜನರೆಲ್ಲರೂ 'ಗಿರಿ'ಯನ್ನು 'ಆದಿ ಮಹಿಳೆ' ಎಂದು ಗೌರವಿಸುತ್ತಾರೆ. ಬರ್ಮದೇವನು ತನ್ನ ಭಕ್ತನಾದ ಬರ್ಮ ಆಳ್ವನಿಗೆ ತಪಸ್ಸಿನ ವರವಾಗಿ ಈ ಸಿರಿಯನ್ನು ನೀಡಿದನೆಂಬುದನ್ನು ಗಮನಿಸಬೇಕು. ನಮ್ಮ ದೇಶದ ಎರಡು ಮಹಾಕಾವ್ಯಗಳು ಪುತ್ರರನ್ನು ವರವಾಗಿ ಪಡೆದ ಕಥೆಗಳನ್ನು ಹೇಳುತ್ತವೆಯೇ ಹೊರತು ಪುತ್ರಿಯರದ್ದ ನ್ನಲ್ಲ. ಆದರೆ ಶೈವಧರ್ಮದಲ್ಲಿ ಮೇನಕಾದೇವಿ ತಪ ಸ್ಸಿನ ಫಲವಾಗಿ ಪಾರ್ವತಿಯನ್ನು ಪಡೆಯುತ್ತಾಳೆ. ಸಿರಿಯ ಕಥೆಯಲ್ಲಿ ವ್ಯಕ್ತವಾಗುವ ಬದುಕಿನ ಆಯ್ಕೆಯ ಸ್ವಾತಂತ್ರ್ಯ, ಹೋರಾಟ ಮತ್ತು ಗೆಲುವಿನ ಅಂಶಗಳು ಇಂದಿನ ಮಹಿಳೆಯರಿಗೆ ಧನಾತ್ಮಕ ಅಂಶಗಳಾಗಿ ಹೆಚ್ಚಿನ ಆತ್ಮವಿಶ್ವಾಸ ಪಡೆಯಲು ನೆರವಾಗಬಲ್ಲವು.

### ಶಕ್ತಿ ಆರಾಧನೆ

ಶಾಕ್ತಧರ್ಮದ ದೃಷ್ಟಿಯಲ್ಲಿ ಸ್ತ್ರೀಯರಾಗಿರುವುದು

ಒಂದು ಅನುಗ್ರಹದ ಸ್ಥಿತಿಯೆನಿಸುತ್ತದೆ. ಸ್ತ್ರೀ ಶರೀರ ದಲ್ಲಿ ಏನೂ ಕಳಂಕವನ್ನು ಈ ಪರಂಪರೆ ಕಾಣುವುದಿಲ್ಲ. ಜಗತ್ತಿನ ಮೂಲಭೂತ ಶಕ್ತಿಯನ್ನು ಸ್ತ್ರೀಸ್ವರೂಪದಲ್ಲಿ ಸ್ವೀಕರಿಸುವ ಶಾಕ್ತರಿಗೆ ಈ ಶಕ್ತಿಯು ಅನಿರ್ಬಂಧಿತವಾದ ಸಾರ್ವಭೌಮ ಇಚ್ಛಾಶಕ್ತಿ, ದಿವ್ಯಜ್ಞಾನ, ದೈವಿಕ ಕಾರ್ಯ ಗಳ ಸ್ವರೂಪದ್ದಾಗಿದೆ. ಸ್ತ್ರೀಯರು ಮಾತೆಯರಾಗಬಲ್ಲ ಸಾಮರ್ಥ್ಯದಿಂದಾಗಿ ಈ ಶಕ್ತಿಗೆ ಅತ್ಯಂತ ನಿಕಟವಾದವ ರೆಂದು ಇಲ್ಲಿ ಗೌರವಿಸಲ್ಪಡುತ್ತಾರೆ. ಶಾಕ್ತಧರ್ಮದಲ್ಲಿ ನೇತೃತ್ವ ವಹಿಸುವ ಅಧಿಕಾರ ಸ್ತ್ರೀಯರಿಗೂ ಇದೆ. ಹಲವು ಸಂದರ್ಭಗಳಲ್ಲಿ ಸ್ತ್ರೀಯರಿಗೆ ಆದ್ಯತೆಯನ್ನು ತಾಂತ್ರಿಕ ಧರ್ಮದಲ್ಲಿ ನೀಡಲಾಗಿದೆ.

ಶಾಕ್ತಧರ್ಮವು ಕರ್ನಾಟಕದಲ್ಲಿ ಪ್ರಾಬಲ್ಯ ಗಳಿಸಿದ್ದರ ಬಗ್ಗೆ ಸರಿಯಾದ ದಾಖಲೆಗಳು ದೊರೆತಿಲ್ಲ. ಸುತ್ತಲಿನ ಪರಿಸರದಲ್ಲಿ ಈ ಪಂಥದವರ ಬಗ್ಗೆ ತಿರಸ್ಕಾರ ಅವಹೇಳನಗಳೇ ಇದ್ದಾಗ, ತಮ್ಮ ಇರವಿನ ಬಗ್ಗೆ ದಾಖಲೆ ಉಳಿಸಿಡುವುದೂ ಇವರಿಗೆ ಕಷ್ಟವಾಗಿದ್ದೀತು. ಅನೇಕ ಶಾಕ್ತರು ಹೊರಗೆ ತಮ್ಮನ್ನ ಶೈವರೆಂದು ಹೇಳಿ ಕೊಳ್ಳುತ್ತಿದ್ದುದುಂಟು. ಸಾಂಸ್ಕೃತಿಕವಾಗಿ ತನ್ನ ಉಳಿವಿ ಗಾಗಿ ಶಾಕ್ತಧರ್ಮವು ಅನೇಕ ಕಷ್ಟಗಳನ್ನೆದುರಿಸಿ ಹೋರಾಡಬೇಕಾಯಿತು. ಈ ಹೋರಾಟವನ್ನು ಇಂದು 'ಸ್ತ್ರೀಯಾತ್ಮಕ ತಾತ್ವಿಕ ಹೋರಾಟ'ವೆಂದು ಅರ್ಥೈಸ ಲಾಗುತ್ತದೆ.

ಕರ್ನಾಟಕದ ಶಾಸನಗಳಲ್ಲಿ ತಾಂತ್ರಿಕ ವಿಧಾನಗಳು, ಕಾಳಿ ಆರಾಧನೆಯ ಉಲ್ಲೇಖಗಳು ಕಂಡುಬರುತ್ತವೆ. ಕಾಳಿಯನ್ನು ಅನೇಕ ಹೆಸರುಗಳಿಂದ ಅನೇಕ ರೀತಿಗಳಿಂದ ಆರಾಧಿಸುವ ಪದ್ಧತಿಗಳಿವೆ. ಹಲವಾರು ಶಾಕ್ತ ದೇವಾ ಲಯಗಳು, ಕೇಂದ್ರಗಳು, ಫಲವಂತಿಕೆಯ ದೇವತಾ ಆರಾಧನಾ ಕೇಂದ್ರಗಳು ಇಂದು ರೂಪಾಂತರ ಹೊಂದಿ ಪಿತೃಪ್ರಧಾನ ವ್ಯವಸ್ಥೆಯ ದೇವತೆಗಳಿಗೆ ತಮ್ಮ ಸ್ಥಳ ವನ್ನು ತೆರವು ಮಾಡಿಕೊಟ್ಟಿವೆ. ಕರ್ನಾಟಕದಲ್ಲಿ ಲಭ್ಯ ವಿರುವ ಕಾಳಿ–ಚಾಮುಂಡಿಯರ ಸಂಬಂಧದ ಬಹುದೊಡ್ಡ ಪ್ರಮಾಣದ ಜಾನಪದ ಸಾಹಿತ್ಯ, ಯಕ್ಷಗಾನ ಮುಂತಾದವು ಕಾಳಿಯನ್ನು ತುಂಬ ಬಲಶಾಲಿ, ಸ್ವತಂತ್ರ ಶಕ್ತಿಯನ್ನಾಗಿ ಚಿತ್ರಿಸುತ್ತವೆ. ಶಾಕ್ತಧರ್ಮದ ಅಸ್ತಿ ತ್ವಕ್ಕೂ, ಕಾಳಿಯ ಇಂಥ ಬಲಿಷ್ಠ ಚಿತ್ರ ಕಲ್ಪನೆಗೂ ನಿಕಟವಾದ ಸಂಬಂಧವಿದೆ. ಈ ದಿಕ್ಕಿನಲ್ಲಿ ಲಭ್ಯವಿರುವ ಅಪಾರ ಸಾಮಗ್ರಿಯ ಸರಿಯಾದ ಸಂಶೋಧನೆ, ವಿಶ್ಲೇಷಣೆಗಳು ನಡೆಯಬೇಕಾಗಿವೆ.

## ಕೊಂತಿಪೂಜೆ

ಕರ್ನಾಟಕದ ದಕ್ಷಿಣ ಭಾಗದಲ್ಲಿ ಬ್ರಾಹ್ಮಣೇತರ ಜಾತಿಗಳ ಜನರು ಮಹಾಭಾರತದ ಕುಂತಿಯನ್ನು ಕೊಂತಿ ಯಾಗಿ ಫಲವಂತಿಕೆಯ ದೇವಿಯನ್ನಾಗಿ ಪೂಜಿಸುವ ಆಚರಣೆಯಿದೆ. ಸಿರಿಯ ಹಾಗೆ ಕೊಂತಿಯುದೂ ಅನೇಕ ಕಷ್ಟ, ಕೋಟಲೆಗಳಿಂದ, ಯಶಸ್ಸುಗಳಿಂದ ಕೂಡಿದ ಬದುಕಾಗಿದೆ. ಸಾಮಾನ್ಯವಾಗಿ ಸ್ತ್ರೀಯರೇ ಆಚರಿಸುವ ಬೇಸಾಯ ಸಂಬಂಧಿತವಾದ, ಈ ಕೊಂತಿ ಪೂಜೆಯಲ್ಲಿ ಪುರುಷರೂ ಭಾಗವಹಿಸಲು, ನೆರವಾಗಲು ಅವಕಾಶವಿದೆ. ಆದರೆ ಇದು ಪ್ರಧಾನವಾಗಿ ಗೌರಿ ಪೂಜೆಯಂತೆ ಸ್ತ್ರೀಯರದೇ ಆದ ವಿದ್ಯುಕ್ತ ಆಚರಣೆ. ಈ ಕೊಂತಿಯ ಕಥೆಯಲ್ಲಿ ಮಹಿಳೆಯರ ಬದುಕಿನ ಸಂಕಟ, ಸಂತಾಪ ಗಳನ್ನು ಗುರುತಿಸಲು ಸಾಧ್ಯವಾಗಿದೆ. ಸಾಮಾನ್ಯ ಸ್ತ್ರೀಯರಿಗೆ ತಮ್ಮ ಬದುಕಿನ ಬವಣೆಗಳೂ ಈ ರೀತಿ ಗುರುತಿಸಲ್ಪಡಲೆಂಬ ಗುರಿಯಿದ್ದರೂ ವಾಸ್ತವದಲ್ಲಿ ಅದು ಈಡೇರದು. ಆದರೆ ಕೊಂತಿಯ ಬದುಕಿನ ಕಥೆಯ ಜೊತೆ ತಾದಾತ್ಮ್ಯದ ಮೂಲಕ ಅವರು ತಮ್ಮನ್ನ ಅರಿಯಲು ಸಾಧ್ಯ. ಹಾಗೆಯೇ ಆಕೆಯ ಹೋರಾಟ ದಿಂದ, ಅವಳ ಗೆಲವುಗಳಿಂದ ತಮ್ಮೊಳಗೆ ಆತ್ಮವಿಶ್ವಾಸ ಬೆಳೆಸಿಕೊಳ್ಳಲು ಸಾಧ್ಯವಿದೆ.

ಈ ಬಗೆಯಲ್ಲಿ ಧಾರ್ಮಿಕ, ಪೌರಾಣಿಕ ಮಾದರಿ ಗಳು ಕೆಲವು ಮಟ್ಟಿಗೆ ಇಲ್ಲಿ ಸ್ತ್ರೀಯರಿಗೆ ಧನಾತ್ಮಕ ಸತ್ವ ವೊಂದರ ಮಾದರಿಯನ್ನು ಒದಗಿಸಬಲ್ಲವು. ಆದರೆ ಇತಿಹಾಸದಲ್ಲಿ ಸಾಧನೆ ಮಾಡಿದಂಥ ಸ್ತ್ರೀಯರ ಚರಿತ್ರೆ ನಮ್ಮ ಸಾಂಸ್ಕೃತಿಕ ಬದುಕಿನ ಆಳಕ್ಕೆ ಇಳಿಯಲಿಲ್ಲ. ಶಾಸನಗಳಲ್ಲಿ ವಿದುಷಿಯರು, ಗಾಯಕಿಯರು, ನರ್ತಕಿ ಯರು, ವಾಗ್ಮಿಗಳು, ಸಂನ್ಯಾಸಿನಿ ಸಾಧ್ವಿಯರು, ರಾಜ್ಯಾಡಳಿತ ನಡೆಸಿ ಇತರರಿಗೆ ಆಶ್ರಯ ನೀಡಿದ ರಾಣಿ ಯರು, ಸ್ತ್ರೀಯೋಧರ ಅನೇಕ ಉಲ್ಲೇಖಗಳು ಕಂಡು ಬರುತ್ತವೆ. ಆದರೆ ಇವರ ಸಾಧನೆಗಳ ಬಗ್ಗೆ ಬೆಳಕು ಚೆಲ್ಲುವ, ಗಮನಹರಿಸುವ ಸಂಶೋಧನೆ ಏನೇನೂ ನಡೆದಿಲ್ಲ. ಬಹುವಾಗಿ ರಾಜ ಮನೆತನಕ್ಕೆ ಇಲ್ಲವೇ ದೇವ ದಾಸಿ ಕುಟುಂಬಕ್ಕೆ ಇವರುಗಳು ಸೇರಿದವರಾಗಿದ್ದಾರೆ. ಮೇಲ್ಜಾತಿಯ ಸ್ತ್ರೀಯರ ಜೊತೆ ಜ್ಞಾನದ ಮತ್ತು ಸ್ವಾಭಿವ್ಯಕ್ತಿಯ ಕ್ಷೇತ್ರಕ್ಕೆ ಪ್ರವೇಶಾವಕಾಶ ಪಡೆದಿರುವ ಈ ಕೆಲವೇ ಸ್ತ್ರೀಯರನ್ನು ಹೊರತುಪಡಿಸಿದರೆ ಉಳಿದ ಸ್ತ್ರೀ ಸಮುದಾಯದ ಪ್ರತಿಭೆಯೆಲ್ಲ ಜಾನಪದ ಕ್ಷೇತ್ರಕ್ಕೆ

ಸೇರಿಹೋಗಿದೆ. ಆದ್ದರಿಂದ ಧರ್ಮ, ಪುರಾಣ, ಜಾನಪದ ಸಾಮಗ್ರಿ ಮತ್ತು ಭಾಷೆಗಳ ಕ್ಷೇತ್ರಗಳಲ್ಲಿ ಇಂಥ ಇತ್ಯಾತ್ಮಕ ಮಾದರಿಗಳನ್ನು ಕುರಿತ ಸಂಶೋಧನೆ ವ್ಯಾಪಕವಾಗಿ ನಡೆಯಬೇಕಾಗಿದೆ.

ಇಂಥ ಸಂಶೋಧನೆ ಕೇವಲ ವೈದಿಕ ಕೇಂದ್ರದಿಂದಷ್ಟೇ ನಡೆದರೆ ಹೆಚ್ಚು ನೆರವಾಗಲಾರದು, ವೈದಿಕ ಪರಂಪರೆಯೇ ಎಷ್ಟೋಬಾರಿ ಅವೈದಿಕ ಮತ್ತು ಸ್ತ್ರೀಪರವಾದಂಥ ಅಂಶಗಳನ್ನು ಮುಚ್ಚಿಹಾಕಲು ಇಲ್ಲವೆ ತನ್ನ ಹಿತಾಸಕ್ತಿಗೆ ತಕ್ಕಂತೆ ಅರ್ಥೈಸಲು ಯತ್ನಿಸಿರುವುದುಂಟು. ಮಹಾಭಾರತದಲ್ಲಿ ಬರುವ ದ್ರೌಪದಿಯ ಬಹುಪತಿತ್ವದ ಪ್ರಸಂಗವನ್ನು ಇಲ್ಲಿ ಉದಾಹರಿಸಬಹುದು. ಮೂಲದಲ್ಲಿ ಬಹುಪತಿತ್ವವು ಸಹಜ ಸಾಮಾಜಿಕ ಆಚರಣೆಯಾಗಿದ್ದ ಸಮುದಾಯದಿಂದ ಈ ಕಥೆ ರೂಪುಗೊಂಡಿರಬಹುದು. ಅಲ್ಲಿ ಅದಕ್ಕೆ ವ್ಯಾಖ್ಯಾನದ ಅಗತ್ಯ ಇರುವುದಿಲ್ಲ. ಆದರೆ ಪಿತೃಪ್ರಧಾನ ವ್ಯವಸ್ಥೆಯ ಸಾಂಸ್ಕೃತಿಕ ಪರಿಸರದಲ್ಲಿ ಈ ಬಹುಪತಿತ್ವ ಸಹಜವಾದ, ಸಮಾಜ ಒಪ್ಪುವ ಆಚರಣೆಗೆ ಆಗಲಾರದು. ಆದ್ದರಿಂದ ದ್ರೌಪದಿಯು ಹಿಂದಿನ ಜನ್ಮದಲ್ಲಿ ಶಿವನಬಳಿ ಪತಿಯನ್ನು ಬೇಡಲು ಹೋಗಿ ಐದುಬಾರಿ ಕೇಳಿದ್ದು, ನೀಡಿದ ವರವನ್ನು ಬದಲಾಯಿಸಲಾಗದ ಶಿವನ ಅಸಹಾಯಕತೆಯಿಂದಾಗಿ ಆಕೆ ಐವರು ಪತಿಯರನ್ನು ಪಡೆಯಬೇಕಾಯ್ತು ಎಂಬಂಥ ವಿವರಣೆಗಳೂ ನಂತರ ಸೇರಿಸುವುದು ಅವಶ್ಯಕವೆನಿಸಿರಲು ಸಾಕು.

ಇಂಥ ರೂಪಾಂತರ,ಅರ್ಥವ್ಯಾಖ್ಯಾನಗಳ ನೆಲೆಗಿಂತ ಭಿನ್ನವಾದ ಸ್ಪಷ್ಟವಾದ ಸ್ತ್ರೀಪರ ನೆಲೆಗಳಿರುವ ಅಬ್ರಾಹ್ಮಣ ಆಕರ ಮೂಲಗಳು ನಮಗೆ ಈ ದಿಕ್ಕಿನಲ್ಲಿ ಹೆಚ್ಚು ಸಹಾಯಕವಾಗುವಂತಿವೆ. ಈ ಅಬ್ರಾಹ್ಮಣ ಪರಂಪರೆಯ ಪ್ರಾಮುಖ್ಯವು ಕುಗ್ಗಿದಷ್ಟೂ, ನಾವು ಸಶಕ್ತವಾದ, ದೃಢವಾದ ಮಹಿಳಾ ಪರವಾದ ಶಕ್ತಿ ಮೂಲವನ್ನು ನಾವು ಕಳೆದುಕೊಳ್ಳುತ್ತಿರುತ್ತೇವೆ. ಆದ್ದರಿಂದ ನಮ್ಮ ಸಂಸ್ಕೃತಿಯ ಒಳಪದರಗಳಲ್ಲಿ ಅಡಗಿರುವ ಅನೇಕ ಪರಸ್ಪರ ವಿರುದ್ಧ ಅಂಶಗಳ ಒಳಗಿಂದ ಇಂದಿನ ಮಹಿಳೆಯರ ಬದುಕಿಗೆ, ಮಹಿಳಾ ಚಳವಳಿಗೆ ಪೂರಕವಾದ, ಬೆಂಬಲವೊದಗಿಸಬಲ್ಲ ಆತ್ಮವಿಶ್ವಾಸ ಮೂಡಿಸಬಲ್ಲಂಥ ಮಾದರಿಗಳನ್ನು ನಾವು ಇರಿಸಿಕೊಳ್ಳಬೇಕಾಗಿದೆ.

* ಸಂಗ್ರಹಾನುವಾದ: ಬಿ. ಎನ್. ಸುಮಿತ್ರಾಬಾಯಿ



---

## ಬುರ್ಖಾದೊಳಗಿನ ಹಾಡು

ಬುರ್ಖಾದೊಳಗಿನ ಕಾವು
ಸ್ಫೋಟಿಸುವ ಮುನ್ನ
ಮುಕ್ತವಾಗಲು ಬಿಡಿ ನನ್ನ
ನಾನು ತಣ್ಣೀರ ಜಲಧಾರೆಯಾಗಬೇಕು

ಹಗಲ ಕೋಣೆಯ ಒಳಗೆ
ಇರುಳತನ ತುಂಬಿದವರೆ
ಬಂಧನದ ಬೀಗವನು ಬೆತ್ತಲಾಗಿಸಿ ಸಿಡಿದು
ಸೂರ್ಯನೊಡೆ ನಾನು ಮಾತಾಡಬೇಕು

ಕಣ್ಣ ಮುಂದಿನ ಉಕ್ಕ ಪರದೆ ಕರಗಿಸಿ ನಾನು
ಮಮ್ತಾಜಳ ಮಹಲನ್ನು ಕಾಣಬೇಕು
ನನ್ನತನವನ್ನೆಲ್ಲಾ ಅದಕ್ಕಚ್ಚಿ ಬೆಳೆಬೆಳೆದು
ಆದ ಮೀರಿ ಮುಗಿಲಾಗಿ ನಿಲ್ಲಬೇಕು

ಕಟುಕನೆದೆ ಗೂಡಿನೊಳು ಗುಟುಗುಡುವ ಗೂಬೆಗಳು
ಧರ್ಮಯುದ್ಧದ ಕೂಗು, ಕಹಳೆ ಅರಚುವ ಮುನ್ನ
ನೀಲಿ ಬಾನಲಿ ಶ್ವೇತ
ರೆಕ್ಕೆ ಹರಡಬೇಕು
ಕುರಾನ ಸುತ್ತಲ ಪೊದೆಯ ಒಳಗಿರುವ ಸಾಲುಗಳು
ಹಾವಾಗಿ ಎದೆ ಕಚ್ಚಿ ವಿಷ ಹರಡುವಾ ಮುನ್ನ
ಎನ್ನ ಹೃದಯ ಧರೆಯಲಿ
ಕುಸುಮ ಅರಳಬೇಕು
ಪರದೆ ಪೊರೆಯನು ಸುಟ್ಟು
ಅದಸುತ್ತ ನಾ ನಿಂತು
ಸ್ವಾತಂತ್ರ್ಯ ಗೀತೆಯನು ಹಾಡಬೇಕು

— ಬಿ. ಪೀರ್ ಬಾಷ



# ಶಬ್ದವೇಗವನ್ನು ಮೀರಿದ ಹಾರಾಟಗಾರ್ತಿ

ವ್ಯಕ್ತಿವಿಶೇಷ...

## ಬಾರ್ಬರ ಹಾರ್ಮರ್

ನೇಮಿ

ವಿಮಾನ ಹಾರಾಟ ಮಹಿಳೆಗೆ ಹೊಸದಲ್ಲ. ಒಂಭತ್ತು ದಶಕಗಳ ವಾಯುಯಾನದ ಚರಿತ್ರೆಯಲ್ಲಿ, ಉದ್ದಕ್ಕೂ ಹೆಸರು ಮಾಡಿದ ಹಾರಾಟಗಾರ್ತಿಯರಿದ್ದಾರೆ. ಅತ್ಯಂತ ಸಾಮಾನ್ಯ ಹಿನ್ನೆಲೆಯಿಂದ ಬಂದವರು–ಸಂಗೀತ ಕಲಿಯುತ್ತಿದ್ದ ಹುಡುಗಿ, ಕಛೇರಿಯಲ್ಲಿ ಟೈಪಿಸ್ಟ್ ಆಗಿದ್ದ ಮಹಿಳೆ–ಹಾರಾಟದತ್ತ ಆಕರ್ಷಿತರಾದರು, ಹಣದ ಮುಗ್ಗಟ್ಟಿನಲ್ಲಿ ದುಬಾರಿಯ ಹಾರಾಟವನ್ನು ಕಲಿತು, ದಾಖಲೆಗಳನ್ನು ಸ್ಥಾಪಿಸಿದರು. ಇದೀಗ ಇಂಥಹುದೇ ನಿರಾಡಂಬರ ನೆಲೆಯಿಂದ ಬಂದ ಮಹಿಳೆ ಬಾರ್ಬರಾ, ಕಾನ್ಕಾರ್ಡ್ ವಿಮಾನವನ್ನು ಹಾರಿಸಿ ಶಬ್ದವೇಗವನ್ನು ಮೀರಿದ ಮೊಟ್ಟ ಮೊದಲ ಹಾರಾಟಗಾರ್ತಿಯಾಗಿದ್ದಾಳೆ. ಈಕೆ ಒಂದು ಸಲೂನಿನಲ್ಲಿ ಕೇಶಾಲಂಕಾರ ಕಲಿಯುತ್ತಾ ತನ್ನ ವೃತ್ತಿಯನ್ನು ಪ್ರಾರಂಭಿಸಿದಾಕೆ !

ಕಾನ್ಕಾರ್ಡ್ ಪ್ರತಿಯೊಬ್ಬ ವಿಮಾನ ಚಾಲಕನ ಕನಸಿನ ವಿಮಾನ, ಕಾನ್ಕಾರ್ಡ್ ಶಬ್ದವೇಗವನ್ನು ಮೀರಿ ಹಾರುವ ಸಾರಿಗೆ ವಿಮಾನ. ಶಬ್ದವೇಗದ ಎರಡರಷ್ಟು ವೇಗದಲ್ಲಿ ಹಾರುವ ವಿಮಾನ ಇದು. ಇಂಥಾ ಒಂದು ವಿಮಾನವನ್ನು ವಿನ್ಯಾಸ ಮಾಡಲು 1962ರಲ್ಲಿ ಬ್ರಿಟನ್ ಮತ್ತು ಫ್ರಾನ್ಸ್ ಸರಕಾರಗಳು ಒಪ್ಪಂದ ಮಾಡಿಕೊಂಡವು. 1979ರ ಹೊತ್ತಿಗೆ 19 ಕಾನ್ಕಾರ್ಡ್ ವಿಮಾನಗಳು ಹಾರಿದ್ದವು. 1975ರಲ್ಲಿ ಈ ವಿಮಾನ 5335 ಗಂಟೆಗಳ ಹಾರಾಟದ ನಂತರ ಪೂರ್ಣ ಪ್ರಮಾಣದಲ್ಲಿ ಪ್ರಯಾಣಿಕರನ್ನು ಹೊತ್ತೊಯ್ಯಲು ಬೇಕಾದ ವಾಯುಯೋಗ್ಯ ಪ್ರಮಾಣ ಪತ್ರವನ್ನು ಪಡೆಯಿತು. ಈ ವಿಮಾನದಲ್ಲಿ 128 ಪ್ರಯಾಣಿಕರು ಕೂರಬಹುದಿದೆ.

ಬಾರ್ಬರ ಹಾರ್ಮರ್, ಶಬ್ದವೇಗವನ್ನು ಮೀರಿದ ಮೊಟ್ಟ ಮೊದಲ ಮಹಿಳಾ ಪೈಲಟ್. 39 ವರ್ಷದ ಈ ಹಾರಾಟಗಾರ್ತಿ, ಕೇಶಾಲಂಕಾರದಿಂದ ತನ್ನ ಉದ್ಯೋಗದ ಬದುಕನ್ನು ಆರಂಭಿಸಿದ್ದಳು. ನಾಲ್ಕು ಜನ ಅಕ್ಕ ತಂಗಿಯರಲ್ಲೊಬ್ಬಳಾದ, ಬಾರ್ಬರಗೆ, 15ನೇ ವಯಸ್ಸಿಗೆ 'ಬದುಕಿಗಾಗುವಷ್ಟು ವಿದ್ಯೆ ಕಲಿತೆ' ಎನಿಸಿ, ಶಾಲೆ ಬಿಟ್ಟಳು. ಸಲೂನ್ ಒಂದರಲ್ಲಿ ಕೇಶಾಲಂಕಾರದ ತರಪೇತಿಗೆ ಸೇರಿದಳು. ಅಲ್ಲಿಯೂ ಅವಳು ಎಲ್ಲರಿಗಿಂತ ಕೊಂಚ ಹೆಚ್ಚೇ ನಿಪುಣಳಿದ್ದಳು. ಶಾಲೆಯಲ್ಲಿ ಕೂಡ ಓದಿನಲ್ಲಿ ಮುಂದಿದ್ದ ಬಾರ್ಬರಾ, ವಿಶ್ವವಿದಾಲಯಕ್ಕೆ ಹೋಗುವ ಆಸೆಯನ್ನೇ ವ್ಯಕ್ತಪಡಿಸದಿದ್ದುದು, ಆಕೆಯ ಪ್ರಾಧ್ಯಾಪಕರಿಗೆ ಸಾಕಷ್ಟು ನಿರಾಶೆ ತರಿಸಿದ್ದುಂಟು. ಆದರೆ ಶಾಲೆ ಬಿಡುವ ಬಗ್ಗೆ ತಾಯಿಯು ಆಕ್ಷೇಪವೇನೂ ಇರಲಿಲ್ಲ, ಯಾವುದಾದರೂ ಉದ್ಯೋಗಕ್ಕೆ ತರಪೇತು ಗೊಳ್ಳಬೇಕೆಂಬುದಷ್ಟೆ ಆಕೆಯ ಆಶಯವಾಗಿತ್ತು. ಸ್ಥಳೀಯ ಸಲೂನ್ ಒಂದರಲ್ಲಿ ಬಾರ್ಬರಾ ಕೇಶಾಲಂಕಾರದ ತರಪೇತಿಗೆ ಸೇರಿಕೊಂಡಳು . ಕೆಲವೇ ಸಮಯದಲ್ಲಿ ಸಾಕಷ್ಟು ಪರಿಣತಳೂ ಆದಳು. ಆರು ವರ್ಷದ ಈ ಅನುಭವದ ನಂತರ ಬದುಕಿನಿಂದ ಬಹಳಷ್ಟು ಬಯಸಿದ ಬಾರ್ಬರಾಗೆ ತನ್ನ ಪ್ರತಿಭೆಯೆಲ್ಲ ಸಲೂನಿನಲ್ಲಿ ಕೂದಲು ಕತ್ತರಿಸುತ್ತಾ ಮುಗಿಯಬಾರದು ಎನಿಸಿತು. ಒಂದಿಷ್ಟು ಮುಂದೆ ಓದಲು ರಾತ್ರಿ ಕಾಲೇಜಿಗೆ ಸೇರಿದಳು.

ಬಾರ್ಬರಾಗೆ ಮೊದಲಿಂದಲೂ ವಿಮಾನಗಳು, ವಿಮಾನ ನಿಲ್ದಾಣಗಳು ಎಂದರೆ ಒಂದು ವಿಧವಾದ ಆಕರ್ಷಣೆ ಇತ್ತು. ಹೀಥ್ರೂ ಉದ್ಯೋಗ ಕೇಂದ್ರಕ್ಕೆ ಬರೆದುಕೊಂಡಾಗ ಗಾಟ್ವಿಕ್‌ನಲ್ಲಿ ವಾಯುಸಂಚಾರ ನಿಯಂತ್ರಕಿಯಾಗಿ ಕೆಲಸ ಸಿಕ್ಕಿತು. ಬಿಡುವಿನ ಸಮಯದಲ್ಲಿ ಈಕೆ ಇಲ್ಲಿ ವಿಮಾನ ಹಾರಾಟ ಕಲಿತಳು. ಮೊದ ಮೊದಲು ಹಾರಾಟ ಹೆದರಿಕೆ ಹುಟ್ಟಿಸಿದ್ದುಂಟು. ಕೆಲವೇ ದಿನಗಳಲ್ಲಿ ಭೀತಿ, ಸಂಭ್ರಮವಾಗಿ, ಖುಷಿಯಾಗಿ ಎದುರುನೋಡುವ ಅನುಭವವಾಗಿ ಹಾದು ಬಂತು. ಎರಡು ಬಾರಿ ಎಂಜಿನ್ ಕೈಕೊಟ್ಟ ಸಂದರ್ಭವಿದೆ. ಮತ್ತೊಂದು ಎಂಜಿನ್ ಇರುವುದರಿಂದ ಯಾವ ಅನಾಹುತವೂ ಇಲ್ಲದೆ ವಿಮಾನ ಇಳಿಸಲಾಯಿತು.

ಈ ಸಂದರ್ಭದಲ್ಲೇ ಬ್ಯಾಂಕಿನಿಂದ 10,000

ಪೌಂಡುಗಳ ಸಾಲ ಬೇಡಿ, ವಾಣಿಜ್ಯ ಹಾರಾಟದ ಪರವಾನೆ ಪಡೆಯಲು ತರಪೇತುಗೊಂಡಳು. ಇದು ಸಣ್ಣ ಮೊತ್ತವಾಗಿರಲಿಲ್ಲ. 1982ರಲ್ಲಿ ಬಾರ್ಬರಾ ಲೈಸೆನ್ಸ್ ಪಡೆದರೂ, ತಟ್ಟನೆ ಆಕೆಗೆ ಕೆಲಸ ಸಿಗುವಂತಿರಲಿಲ್ಲ. ದೇಶದಲ್ಲಿದ್ದ ಪ್ರತಿ ಏರ್ಲೈನ್ಸ್‌ಗೂ ಅರ್ಜಿ ಹಾಕಿಕೊಂಡ ಬಾರ್ಬರಾಗೆ ಅಚ್ಚರಿ ಕಾದಿತ್ತು. ಆಕೆ ಬೇರೆ ಬೇರೆಯಾಗಿ ಅರ್ಜಿ ಹಾಕಿಕೊಂಡಿದ್ದ ಮೂರು ಸಂಸ್ಥೆಗಳು ಒಗ್ಗೂಡಿದ ಕಾರಣ, ಒಟ್ಟುಗೂಡಿದ ಸಂಸ್ಥೆಯ ಮುಖ್ಯ ಪೈಲಟ್ ಎದುರು ಬಾರ್ಬರಾಳ ಮೂರು ಅರ್ಜಿಗಳು ಕುಳಿತಿದ್ದವು. ಇಂಥಾ ಪಟ್ಟು ಹಿಡಿದ ಮಹಿಳೆಯನ್ನು ನೋಡುವ ಕುತೂಹಲದಿಂದ ಸಂದರ್ಶನಕ್ಕೆ ಕರೆ ಬಂತು. ಸಂದರ್ಶನಕ್ಕೆ ಕರೆದ ಏಕೈಕ ಮಹಿಳೆ ಆಕೆ. ಪಕ್ಕಾ ಹಮ್ಮು ಬಿಮ್ಮಿನ ಆ ಮನುಷ್ಯನಿಂದ ಬಾರ್ಬರಾ ಹುದ್ದೆ ಗಿಟ್ಟಿಸಿದ್ದೇ ದೊಡ್ಡ ವಿಷಯ. ಆದರೆ ಬಾರ್ಬರಾ ಸುಲಭ ಸೋಲೊಪ್ಪುವ ಹೆಣ್ಣಲ್ಲ. ಆಕೆಯ ಕಾರ್ಯ ಸಮರ್ಥತೆ, ಕೆಲಸದ ಬಗ್ಗೆ ನಿಷ್ಠೆ ಗಂಡು ಸಹೋದ್ಯೋಗಿಗಳನ್ನು ಮಿರಿಸುವಂತಿತ್ತು.

ಮೊದಲ ಮೂರು ವರ್ಷಗಳು ಇತರೆ ವಿಮಾನಗಳನ್ನು ಹಾರಿಸಿದ ಬಾರ್ಬರಾಗೆ, ಆಕೆ ದುಡಿಯುತ್ತಿದ್ದ ಸಂಸ್ಥೆಯನ್ನು "ಬ್ರಿಟಿಷ್ ಏರ್ವೇಸ್" 1987ರಲ್ಲಿ ಕೊಂಡುಕೊಂಡಾಗ ಕಾನ್ಕಾರ್ಡ್ ವಿಮಾನ ಹಾರಿಸುವ ಅವಕಾಶ ಕಂಡುಬಂತು. ತೀವ್ರ ತರಪೇತಿನ ನಂತರ ಬಾರ್ಬರಾಗೆ ಕಾನ್ಕಾರ್ಡ್ ಹಾರಿಸುವ ಅವಕಾಶ ಲಭಿಸಿತು. ಅದರ ವೇಗ, ಅದರ ಸದ್ದು ಎಲ್ಲವೂ ಬಾರ್ಬರಾಗೆ ವರ್ಣನಾತೀತವಾಗಿತ್ತು.

ಹಾರಾಟದ ಉತ್ಕಟ ಕ್ಷಣಗಳಲ್ಲಿ ಎಲ್ಲಿಲ್ಲದ ಖುಷಿ ಕಾಣುವ ಬಾರ್ಬರಾಗೆ ತನ್ನ ಅವಿವಾಹಿತ ಸ್ಥಿತಿಯ ಬಗ್ಗೆ ಪಶ್ಚಾತ್ತಾಪವೇನೂ ಇಲ್ಲ. ಹಾರಾಟ ಆಕೆಯ ಅಚ್ಚುಮೆಚ್ಚಿನ ಉದ್ಯೋಗ ಮತ್ತು ಹವ್ಯಾಸ ಎರಡೂ ಆಗಿದೆ. 

---

# ಹೆಣ್ತನಕ್ಕೆ ಸುಂಕವೇ?

ಸ್ಯಾನಿಟರಿ ನ್ಯಾಪ್ಕಿನ್ನುಗಳು ಅವಶ್ಯಕವಲ್ಲದ ಸುಖ ಭೋಗದ ವಸ್ತುಗಳೆ? ನಮ್ಮ ಗಣ್ಯ ಸಚಿವರು ಹಾಗೆ ತಿಳಿದಂತಿದೆ. ಇಲ್ಲದಿದ್ದರೆ ಓರ್ವ ಮಹಿಳೆಯ ಆರೋಗ್ಯ ಹಾಗೂ ತಿಂಗಳಮುಟ್ಟಿಗೆ ಅಗತ್ಯವಾದ ಅನಿವಾರ್ಯವಾದ ಸ್ಯಾನಿಟರಿ ನ್ಯಾಪ್ಕಿನ್ನುಗಳ ಮೇಲೆ ಶೇಖಡಾ 20ರಷ್ಟು ತೆರಿಗೆ ಹಾಕಿರುವ ಅರ್ಥವೇನು?

ಒಂದು ಸ್ಯಾನಿಟರಿ ನಾಪ್ಕಿನ್ ಬೆಲೆ ಎಷ್ಟು ಗೊತ್ತೆ? ಹೆಚ್ಚು ಕಮ್ಮಿ ಎರಡರಿಂದ ಮೂರು ರೂಪಾಯಿಗಳು. ಒಂದಿಬ್ಬರು ಹೆಣ್ಣು ಮಕ್ಕಳಿರುವ ಕೆಳ ಮಧ್ಯಮವರ್ಗ ತಿಂಗಳಿಗೆ ನೂರಿನ್ನೂರು ರೂಪಾಯಿಗಳು ಇದಕ್ಕೆಂದೇ ತೆಗೆದಿಡುವುದು ಸಾಧ್ಯವೆ? ಅಪ್ಪನಿಂದ ಹಣ ಕೇಳಲಾರದೆ, ಮಾರುದ್ದದ ಬಟ್ಟೆಗಳನ್ನು ಹೇರಿಕೊಂಡು ತಿಂಗಳ ಆ ಮುಜುಗರದ ಮುಟ್ಟಿನ ದಿನವನ್ನು ಕಳೆದ ಮಹಿಳೆಯೊಬ್ಬಳು, 'ನನಗೆ ನಿಜಕ್ಕೂ ಸ್ವಾತಂತ್ರ್ಯ ಬಂದದ್ದು ನನ್ನ ಮೊದಲ ಸಂಬಳ ಬಂದು, ಒಂದು ಪ್ಯಾಕ್ ಸ್ಯಾನಿಟರಿ ನ್ಯಾಪ್ಕಿನ್ ಕೊಳ್ಳುವಂತಾದಾಗ' ಎಂದದ್ದುಂಟು. ನಮ್ಮ ತಾಯಂದಿರ ಸರ್ವ ಕಾರ್ಯಕ್ರಮಗಳೂ ಅವರ ಮುಟ್ಟಿನ ದಿನದ ಮೇಲೆ ನಿಂತಿರುತ್ತಿದ್ದವು. ಎಲ್ಲಿಗಾದರೂ ಪ್ರಯಾಣ ಹೊರಟರೆ; ಬಟ್ಟೆಯನ್ನು ಒಗೆದು ಹಾಕಿಕೊಳ್ಳುವುದೆಲ್ಲಿ? ನೆಂಟರು ಇಷ್ಟರ ಮನೆಗಳಿಗೆ ಹೋಗುವುದಕ್ಕೂ ಮುಜುಗರ, ತಮ್ಮ ಸ್ಥಿತಿಯನ್ನು ಜಗಜ್ಜಾಹೀರು ಮಾಡಬೇಕಲ್ಲ. ಸರಿಯಾಗಿ ಹೀರದ ಬಟ್ಟೆಗಳ ಸಹವಾಸದಲ್ಲಿ, ಎಲ್ಲಿ ಹೊರಗೆ ಕಾಣುವುದೋ ಎಂಬ ಭೀತಿಯಲ್ಲಿ ಕಳೆದ ದಿನಗಳು ನಮ್ಮ ಅಜ್ಜಿಯರ ಕಾಲಕ್ಕೆ ಮುಗಿದದ್ದಲ್ಲ. ಇಂಥಾ ಆತಂಕದಲ್ಲಿ ಹೆಣ್ಣು ಮಕ್ಕಳಿಗೆ ಹೆಚ್ಚಿನ ಚಟುವಟಿಕೆಗಳಿಗೆಲ್ಲಿ ಅವಕಾಶವಿತ್ತು?

ಸ್ಯಾನಿಟರಿ ನ್ಯಾಪ್ಕಿನ್ನುಗಳು ಆರೋಗ್ಯ ಹಾಗೂ ನೈರ್ಮಲ್ಯದ ದೃಷ್ಟಿಯಿಂದ ಮಹಿಳೆಯರಿಗೆ ಒಂದು ವರದಾನದಂತೆ ಮಾರುಕಟ್ಟೆಗೆ ಬಂದವು. ಏಕಾಂತದಲ್ಲಿ ಬಳಸಿ ಬಿಸಾಡಬಲ್ಲ ನ್ಯಾಪ್ಕಿನ್ನುಗಳು ಬಹಿರಂಗವಾಗಿ ಒಗೆದು ಒಣಗಿಸಿಕೊಳ್ಳಬೇಕಾದ ಮುಜುಗರವನ್ನು ತೊಡೆದು ಹಾಕಿದವು. ಆದರೆ ಈ ನ್ಯಾಪ್ಕಿನ್ನುಗಳು ಎಲ್ಲವರ್ಗದ ಮಹಿಳೆಯರಿಗೆ ಎಟಕುವಂತೆಲ್ಲಿದೆ? ಶಾಲಾ ಕಾಲೇಜುಗಳಿಗೆ ಹೋಗುವ ಮಧ್ಯಮವರ್ಗದ ಹುಡುಗಿಯರಿಗೂ ದುಬಾರಿ ಎನಿಸುವ ಈ ಅಗತ್ಯದ ವಸ್ತುವಿನ ಮೇಲೆ ಶೇ. 15.75 ಇದ್ದ ತೆರಿಗೆಯನ್ನು ಕಳೆದ ವರ್ಷ ಶೇ. 20ಕ್ಕೆ ಏರಿಸಿಟ್ಟರು. ಪ್ರತಿ ವರ್ಷ ಮಹಿಳೆಯರು ಈ ಅನಿವಾರ್ಯದ ವಸ್ತುವಿನ ಮೇಲೆ 17 ಕೋಟಿ ರೂ.ಗಳನ್ನು ತೆರಿಗೆ ರೂಪದಲ್ಲಿ ಕಟ್ಟುತ್ತಾರೆ. ಈ ವರ್ಷದ ಬಜೆಟ್‌ನಲ್ಲಾದರೂ ನಮ್ಮ ಸರ್ಕಾರ ಈ ತೆರಿಗೆಯನ್ನು ಕಿತ್ತುಹಾಕಬೇಕು ಎಂದು 'ಸಾವಿ' ಪತ್ರಿಕೆ ಸಚಿವರಿಗೆ ಬರೆದ ಆಗ್ರಹದ ಪತ್ರಕ್ಕೆ 'ಅಚಲ' ಕೂಡಾ ದನಿಗೂಡಿಸುತ್ತದೆ. ★

# ಕಿರಣ್ ಬೇಡಿ - ಕಾರಾಗೃಹದ ಕತ್ತಲ ಕೋಣೆಗಳಿಗೆ ಬೆಳಕಿನ ಸ್ಪರ್ಶ

ಕಿರಣ್ ಬೇಡಿ ಭಾರತದ ಮೊಟ್ಟ ಮೊದಲ ಮಹಿಳಾ ಐ ಜಿ.ಪಿ. ಕಾರಾಗೃಹದ ಕತ್ತಲ ಕೋಣೆಗಳಿಗೆ ಬೆಳಕು ತಂದಾಕೆ. ಹೆಸರು ಕೇಳಿದರೇ ನಡುಗುವಂಥಹ ದಿಲ್ಲಿಯ "ತಿಹಾರ್" ಜೈಲುಗಳಲ್ಲಿ ಸುಧಾರಣೆಗಳನ್ನು ತಂದ ಧೀರ ಮಹಿಳೆ. ಈಕೆ ಇಲ್ಲಿಯ ಜೈಲುಗಳಲ್ಲಿ ದುರ್ವ್ಯಸನಗಳನ್ನು ಬಿಡಿಸುವ ಕೇಂದ್ರವನ್ನು ತೆರೆದಿದ್ದಾರೆ. ಜೈಲುವಾಸಿಗಳಿಗೆ ಬ್ಯಾಂಕ್ ಸವಲತ್ತು, ಕುಟುಂಬದೊಡನೆ ಉತ್ತಮ ಸಂದರ್ಶನಾ ಸೌಲಭ್ಯ, ಕಿರಣ್ ಬೇಡಿ ತಂದಿರುವ ಮೊದಲ ಆಶಾಕಿರಣ. ಜೈಲುವಾಸಿಗಳು ಮಾನಸಿಕವಾಗಿ ಸುಧಾರಿಸಿ ಬದಲಾಗುವತ್ತ ಹೆಜ್ಜೆ ಇರಿಸಲು ಸಹಾಯಕವಾಗಿ ಅವರೊಳಗಿನ ಪ್ರತಿಭೆಗೆ, ಆಸಕ್ತಿಗೆ ಹಾಡು, ನಾಟಕ ಇತ್ಯಾದಿಗಳ ಅಭಿವ್ಯಕ್ತಿಯನ್ನು ಒದಗಿಸಿರುವ ಕಿರಣ್ ಬೇಡಿ, ತಮ್ಮ ದಕ್ಷತೆಯಿಂದ, ಕಾರ್ಯ ನಿರ್ವಹಣೆಯಿಂದ ಗಮನ ಸೆಳೆದಿರುವುದು ಇದೇ ಮೊದಲಲ್ಲ.

ಕಿರಣ್ ಬೇಡಿ–ಪೇಷಾವಾರಿಯ ಜೂನ್ 9. 1949ರಂದು ಹುಟ್ಟಿದರು. 1971ರಂದು ರಾಜನೀತಿ ಶಾಸ್ತ್ರದಲ್ಲಿ ಎಂ. ಎ. ಮಾಡಿ, ಸಿವಿಲ್ ಸರ್ವೀಸ್ ಪರೀಕ್ಷೆಯಲ್ಲಿ ಪಾಸಾದಾಗ ಕಿರಣ್ ಐ.ಪಿ.ಎಸ್. ಆಯ್ದುಕೊಂಡರು. ಮಹಿಳೆಯರಿಗೆ ಆಗ ಐ.ಪಿ.ಎಸ್. ಓದುವ ಅವಕಾಶವಿರಲಿಲ್ಲ. ಗೃಹ ಖಾತೆ ಕಿರಣ್‌ಳನ್ನು ಬೇರೆ ಪರೀಕ್ಷೆಗಳತ್ತ ಸಾಗಿಸಲು ಪ್ರಯತ್ನಿಸಿತು. ಆದರೆ ಸ್ವತಂತ್ರ ಮನೋಭಾವದ ಈ ಗಟ್ಟಿ ಹುಡುಗಿ ತನ್ನ ಹಟದಿಂದಲೇ ಐ.ಪಿ.ಎಸ್.ಗೆ ಪ್ರವೇಶ ಗಿಟ್ಟಿಸಿದಳು. ಅಂದಿನ ಪ್ರಧಾನ ಮಂತ್ರಿ ಶ್ರೀಮತಿ ಇಂದಿರಾಗಾಂಧಿ ಈ ಎಳೆಯ ಹುಡುಗಿಯ ದೃಢ ನಿಶ್ಚಯವನ್ನು ನೋಡಿ, ಆಕೆಯನ್ನು ಐ.ಪಿ.ಎಸ್.ಗೆ ನೇಮಿಸಲು ಆಜ್ಞಾಪಿಸಿದರು. ಮಸೂರಿನಲ್ಲಿ ತರಪೇತು ಪಡೆದು, ಮೌಂಟ್ ಅಬುವಿನಲ್ಲಿರುವ ಪೋಲೀಸ್ ಅಕಾಡೆಮಿಗೆ ಸೇರಿದರು.

ಆಕೆ ಮೊದಲಿಗೆ 1974ರಲ್ಲಿ ದಿಲ್ಲಿಯ ಚಾಣಕ್ಯಪುರಿಗೆ ಉಪ–ವಿಭಾಗೀಯ ಪೋಲೀಸ್ ಅಧಿಕಾರಿಯಾಗಿ ನೇಮಕಗೊಂಡರು. ಮರು ವರ್ಷವೇ ಗಣತಂತ್ರ ದಿನದ ಮೆರವಣಿಗೆಯಲ್ಲಿ ದಿಲ್ಲಿ ಪೋಲೀಸ್ ದಳದ ಮುಂದಾಳಾದರು. 1977ರಲ್ಲಿ ಎ.ಐ.ಜಿ. ಆಗಿ ಇಂಡಿಯಾ ಗೇಟ್ ಬಳಿ ಅಕಾಲಿ–ನಿರಂಕಾರಿ ಸಿಖ್ ಗಲಭೆಯನ್ನು ಅಡಗಿಸಿದರು. ಈ ಏಕಾಂಗಿ ಮಹಿಳೆ ಕತ್ತಿ ಹಿಡಿದ ಸಿಖ್ಖರ ಎದುರು ಮರದ ಲಾಠಿ ಹಿಡಿದು ಹೋರಾಡಿದಾಕೆ. 1979ರಲ್ಲಿ ಕಿರಣ್ ಬೇಡಿ ಡಿ.ಸಿ.ಪಿ. ಆಗಿ ಪಶ್ಚಿಮ ದಿಲ್ಲಿಯ ಸ್ವತಂತ್ರ ಹೊಣೆಯನ್ನು ಹೊತ್ತರು. ಇಲ್ಲಿ ಈಕೆ 200 ವರ್ಷಗಳಿಂದ ಲಂಗು ಲಗಾಮಿಲ್ಲದೆ ನಡೆದುಕೊಂಡು ಬಂದಿದ್ದ ನಿಷಿದ್ಧ ಮದ್ಯದ ವ್ಯಾಪಾರವನ್ನು ತುಂಡರಿಸಿದರು. ದಶಕಗಳಲ್ಲೇ ಮೊಟ್ಟಮೊದಲಿಗೆ ರಸ್ತೆಗಳ ವಾಹನ ಸಂಚಾರಕ್ಕೊಂದಿಷ್ಟು ವ್ಯವಸ್ಥೆಯನ್ನು ತಂದರು. ಹಾದಿ ಬೀದಿಗಳಲ್ಲಿ ಬೇಕೆಂದಲ್ಲಿ, ಬೇಕಾಬಿಟ್ಟಿ ನಿಲ್ಲಿಸಿ ಹೋಗುವ ಕಾರುಗಳನ್ನು ಯಾರದೆಂದು ಕೂಡಾ ನೋಡದೆ, ಮುಲಾಜಿಲ್ಲದೆ ಕ್ರೇನ್ ತರಿಸಿ ಸಾಗಿಸಿಬಿಡುತ್ತಿದ್ದ ಬೇಡಿ 'ಕ್ರೇನ್ ಬೇಡಿ' ಎಂದು ಹೆಸರು ಗಳಿಸಿದ್ದೂ ಉಂಟು. ಆಕೆಗೆ ದಿಲ್ಲಿಯಿಂದ ವರ್ಗವಾದ ನಂತರ ರಸ್ತೆ ಸಂಚಾರ ಅಂಥಾ ವ್ಯವಸ್ಥೆಯನ್ನು ಮತ್ತೆ ಕಂಡಿಲ್ಲ.

ಅನೇಕ ಪ್ರಶಸ್ತಿ ಪುರಸ್ಕಾರಗಳನ್ನು ಪಡೆದಿರುವ ಕಿರಣ್ ಬೇಡಿಗೆ ಗ್ಯಾಲಂಟ್ರಿ ಪ್ರಶಸ್ತಿಯೂ ಲಭಿಸಿದೆ. ನಿಜ ಜೀವನದಲ್ಲಿ ಕಿರಣ್ ಬೇಡಿ ತುಂಬು ಸ್ನೇಹದ ವ್ಯಕ್ತಿ. ತಮ್ಮ ಹುದ್ದೆಗೆ ಪೂರ್ಣವಾಗಿ ತೆತ್ತುಕೊಂಡವರು. ಹೆಂಗಸರು ಬಾಲ್ಯದಿಂದಲೇ ತಮ್ಮ ಬದುಕನ್ನು ನಿರ್ಮಿಸುವತ್ತ ಚಿಂತಿಸಬೇಕು. ಹುಡುಗಿಯರು ಆರ್ಥಿಕವಾಗಿ ಸ್ವಾವಲಂಬಿಗಳಾಗುವವರೆಗೆ ವಿವಾಹವಾಗಕೂಡದು. ಅವರು ದುಡಿದರೆ ಆರ್ಥಿಕವಾಗಿ ಸ್ವತಂತ್ರರಾಗುತ್ತಾರೆ. ವಿದ್ಯಾವಂತ, ಪ್ರತಿಭಾವಂತ ಹೆಂಗಸು ಆತ್ಮವಿಶ್ವಾಸ, ಆತ್ಮಗೌರವವನ್ನು ಸಹಜವಾಗಿಯೇ ಪಡೆಯುತ್ತಾಳೆ'– ಎನ್ನುತ್ತಾರೆ ಕಿರಣ್ ಬೇಡಿ.

ದೇಶದಲ್ಲಿ ಮೊಟ್ಟಮೊದಲು ಸಂಪೂರ್ಣವಾಗಿ ಮಹಿಳೆಯರೇ ಇರುವ ಪೋಲೀಸ್ ಠಾಣೆ ಕೇರಳದ ಕ್ಯಾಲಿಕಟ್‌ನಲ್ಲಿ 1973ರಲ್ಲಿ ಆರಂಭವಾಯಿತು. ಪದ್ಮಿನಿ ಇಲ್ಲಿಯ ಮೊಟ್ಟಮೊದಲ ಸಬ್ ಇನ್ಸ್‌ಪೆಕ್ಟರ್ ಆಗಿ ಅಧಿಕಾರ ವಹಿಸಿದ್ದರು. 1987ರಲ್ಲಿ ಎರ್ನಾಕುಲಂ ಮತ್ತು ತಿರುವನಂತಪುರಂಗಳಲ್ಲಿ ಮತ್ತೆರಡು ಮಹಿಳಾ ಪೋಲೀಸ್ ಠಾಣೆಗಳನ್ನು ತೆರೆಯಲಾಯಿತು.

# ನಿಮ್ಮ ಪತಿ ಸಿಗರೇಟು ಸೇದುವರೆ ?

ಚಂದ್ರ

ನಿಮ್ಮ ಪತಿ ಸಿಗರೇಟು ಸೇದುವರೆ ? ಹಾಗಿದ್ದರೆ ಅದು ಕೇವಲ ನಿಮ್ಮ ಪತಿಯ ಆರೋಗ್ಯಕ್ಕೆ ಹಾನಿಕಾರಕ ವಲ್ಲ, ನಿಮ್ಮ ಸ್ವಾಸ್ಥ್ಯಕ್ಕೂ ಮಾರಕ ಎಂದು ತಿಳಿದಿದೆಯೆ?

ಕಳೆದ ವರ್ಷ ಅಮೇರಿಕೆಯ ಪರಿಸರ ರಕ್ಷಣಾ ನಿಯೋಗ ಧೂಮಪಾನವನ್ನು ಕುರಿತು ಒಂದು ವರದಿ ಒಪ್ಪಿಸಿದೆ. ಪ್ರಪಂಚದಾದ್ಯಂತ ಮುವತ್ತಕ್ಕೂ ಹೆಚ್ಚು ಅಧ್ಯಯನಗಳನ್ನು ಕೈಗೊಂಡು, ಶ್ವಾಸಕೋಶದ ಕ್ಯಾನ್ಸರಿಗೆ ಗುರಿಯಾದ ಧೂಮಪಾನ ಮಾಡುವ ಗಂಡಂದಿರಿರುವ ಹೆಂಗಸರನ್ನೂ, ಧೂಮಪಾನ ಮಾಡದ ಗಂಡಂದಿರ ಕುಟುಂಬವನ್ನೂ ಪರಿಶೀಲಿಸಿ, ಹೋಲಿಸಿ, ವರದಿ ಸಲ್ಲಿಸಿದೆ. ಪತಿ ಧೂಮ್ರಪಾನ ಮಾಡುವ ಮನೆಯ ಮಹಿಳೆಯರಲ್ಲಿ ಶ್ವಾಸಕೋಶದ ಕ್ಯಾನ್ಸರಿನ ಸಾಧ್ಯತೆ ಹೆಚ್ಚೆಂದು ಈ ವರದಿ ತಿಳಿಸುತ್ತದೆ. ಅಮೇರಿಕೆಯಲ್ಲೊಂದೇ ಜಾಗದಲ್ಲಿ ಶ್ವಾಸಕೋಶದ ಕ್ಯಾನ್ಸರ್, ಸ್ವತಃ ಸಿಗರೇಟು ಸೇದದಿದ್ದರೂ, ನಿಷ್ಕ್ರಿಯವಾಗಿ ಸೇವಿಸುವ ಮೂರು ಸಾವಿರ ಜನರ ಜೀವ ತೆಗೆದುಕೊಳ್ಳುತ್ತಿದೆ.

ನಿಮ್ಮ ಗಂಡಂದಿರ ಸಿಗರೇಟು ಚಟ ಬಿಡಿಸಲಾಗದಿದ್ದರೆ ಬೇಡ, ಮುಂದಿನ ಬಾರಿ ಸಿಗರೇಟು ಹಚ್ಚಿದಾಗ ಹೊರಗೆ ಹೋಗಿ ಸೇದಲು ಹೇಳಿ. ಇಲ್ಲ, ಸೇದುವುದು ಅವರೊಬ್ಬರಾದರೂ, ಹೊಗೆ ಕುಡಿಯುವುದು ನೀವು ಮತ್ತು ನಿಮ್ಮ ಮಕ್ಕಳು.

ಅಷ್ಟೇ ಅಲ್ಲ, ನೀವೇನಾದರೂ ಮಗು ಬೇಕೆಂದು ಯೋಜಿಸುತ್ತಿದ್ದರೆ, ಕೆಲಕಾಲದ ಮಟ್ಟಿಗಾದರೂ ನಿಮ್ಮ ಪತಿಗೆ ಮನೆಯ ಒಳಗೂ, ಹೊರಗೂ ಧೂಮ್ರಪಾನವನ್ನು ಬಿಟ್ಟುಬಿಡಲು ಹೇಳಿ. ಧೂಮ್ರಪಾನ ಮಾಡುವ ಗಂಡಸರು ತಮ್ಮ ಮಕ್ಕಳ, ಮೊಮ್ಮಕ್ಕಳ, ಮುಮ್ಮಕ್ಕಳ ಆರೋಗ್ಯವನ್ನೂ ಹಾಳುಗೆಡವುತ್ತಾರೆ, ಎಂದರೆ ಅಚ್ಚರಿಯಾಗುವುದೆ ? ಕಳೆದ ವರ್ಷ ಮೆಲ್ಬರ್ನ್‌ನಲ್ಲಿ ನಡೆದ ಅಂತರರಾಷ್ಟ್ರೀಯ ಸಮ್ಮೇಳನದಲ್ಲಿ ಅಮೇರಿಕೆಯ ಜೀವರಸಾಯನಶಾಸ್ತ್ರಜ್ಞ ಬ್ರೂಸ್ ಏಮಸ್, ತಂಬಾಕು ಸೇದುವ ತಂದೆಗೂ, ಅವರ ಮಕ್ಕಳ ಶೈಶಾವಸ್ಥೆಯ ಸಾವಿಗೂ, ಜೈವಿಕ ನ್ಯೂನತೆಗೂ' ಸಂಬಂಧವಿರುವ ಸಾಧ್ಯತೆಯತ್ತ ಬಹಳಷ್ಟು ಸೂಚನೆಗಳಿರುವುದನ್ನು ತಿಳಿಸಿದ್ದಾರೆ.

ಉತ್ತರ ಕ್ಯಾರೋಲಿನಾ ವಿಶ್ವವಿದ್ಯಾಲಯದಲ್ಲಿ 15.000 ಮಕ್ಕಳ ಕೇಸುಗಳನ್ನು ತೆಗೆದುಕೊಂಡು ಅಧ್ಯಯಿಸಿದ್ದಾರೆ. ಅಲ್ಲಿಯ ವಿಜ್ಞಾನಿಗಳು, ವಿಪರೀತವಾಗಿ ಸಿಗರೇಟು ಸೇದುವ ತಂದೆಗೆ ಹುಟ್ಟಿದ ಮಕ್ಕಳಲ್ಲಿ ಹುಟ್ಟಿನಿಂದ ಬಂದ ನ್ಯೂನತೆಗಳು, ಹೃದಯದ ಊನಗಳು, ಇತರೆ ಮಕ್ಕಳಿಗೆ ಹೋಲಿಸಿದರೆ ಎರಡರಷ್ಟು ಹೆಚ್ಚು ಕಾಣಿಸಿಕೊಳ್ಳುವ ಸಾಧ್ಯತೆಯನ್ನು ವಿವರಿಸಿದ್ದಾರೆ. ಉತ್ತರ ಕ್ಯಾರೋಲಿನಾದ 'ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಎನ್ವಿರ್‌ನ್‌ಮೆಂಟಲ್ ಹೆಲ್ತ್' 14 ವರ್ಷದ ಕೆಳಗಿರುವ ಕ್ಯಾನ್ಸರಿಗೆ ತುತ್ತಾದ 220 ಮಕ್ಕಳನ್ನು ಪರೀಕ್ಷಿಸಿತು. ಮಗು ಹುಟ್ಟುವ ಮೊದಲ ವರ್ಷದಲ್ಲಿ ಧೂಮಪಾನ ಮಾಡಿದ ತಂದೆಯರಿಗೆ ಹುಟ್ಟಿದ ಮಕ್ಕಳಲ್ಲಿ ರಕ್ತದ ಕ್ಯಾನ್ಸರ್ ಮತ್ತು ಲಿಂಫ್ ಗ್ರಂಥಿಗಳ ಕ್ಯಾನ್ಸರ್ ಇತರೆ ಮಕ್ಕಳಿಗೆ ಹೋಲಿಸಿದರೆ ಎರಡರಷ್ಟು ಹೆಚ್ಚು ಕಾಣಿಸಿಕೊಂಡಿತ್ತು. ಮಿದುಳಿನ ಕ್ಯಾನ್ಸರ್ ಅಂತೂ ಇತರೆ ಮಕ್ಕಳಿಗೆ ಹೋಲಿಸಿದಾಗ ಶೇಕಡಾ 90ರಷ್ಟು ಹೆಚ್ಚಾಗಿ ಕಂಡು ಬಂದಿತು.

'ಬಹಳಷ್ಟು ಮಕ್ಕಳಲ್ಲಿ ಹುಟ್ಟಿನಿಂದ ಕಂಡು ಬರುವ ನ್ಯೂನತೆಗೆ ಮತ್ತು ಮಕ್ಕಳ ಕ್ಯಾನ್ಸರಿಗೆ ತಂದೆಯ ಧೂಮಪಾನ ಕಾರಣ ಎಂದು ನನಗೆ ಮನವರಿಕೆಯಾಗಿದೆ' ಎನ್ನುತ್ತಾರೆ ಬ್ರೂಸ್ ಏಮಸ್. ಬಹಳಷ್ಟು ಹಾನಿಗೆ ಕಾರಣ, ಸಿಗರೇಟಿನ ಹೊಗೆಯಲ್ಲಿರುವ ಸಂಯುಕ್ತ ಪದಾರ್ಥಗಳು ಆಕ್ಸಿಡೈಸ್ ಆಗಿ ಶರೀರದ ಡಿಎನ್ಎಯನ್ನು ನಾಶಪಡಿಸುವುದೇ ಆಗಿದೆ. ಇದು ವೀರ್ಯದಲ್ಲಿಯ ಜೀವಕಣಗಳ ವಿಕಾರಕ್ಕೆ ಕಾರಣವಾಗಬಲ್ಲದು.

ಇಂಥಾ ಜೈವಿಕ ಬದಲಾವಣೆಗಳು ವೀರ್ಯದ ಮೂಲಕ ಮುಂದಿನ ಜನಾಂಗಕ್ಕೆ ರವಾನಿಸಲ್ಪಡುತ್ತದೆ. ವಿಟಮಿನ್ ಸಿ ಇರುವ ಆಹಾರ ಇಂಥ ವೀರ್ಯ ಕಣಗಳ ವಿಕಾರವನ್ನು ಬಹಳಷ್ಟು ಮಟ್ಟಿಗೆ ತಡೆವಲ್ಲಿ ಸಹಕಾರಿಯಾಗಬಲ್ಲದು. ಸಿಗರೇಟು ಸೇದುವವರು ಹೆಚ್ಚುವರಿ ವಿಟಮಿನ್ ಸಿ ಇರುವ ಆಹಾರ ಸೇವಿಸಬೇಕು ಎಂದು ಕೂಡಾ ಬ್ರೂಸ್ ಏಮಸ್ ಸಲಹೆ ನೀಡಿದ್ದಾರೆ.

ನಿಮ್ಮ ಪತಿಯ ಕೈಯಲ್ಲಿ ಇಂದು ಉರಿವ ಸಿಗರೇಟು, ನಿಮ್ಮ ಮುಂದಿನ ಪೀಳಿಗೆಗಳ ಮೇಲೂ ಪರಿಣಾಮ ಬೀರಬಲ್ಲದು. ಅದರ ಹೊಗೆ, ಮುಂದಿನ ಜನಾಂಗಗಳ ಉಸಿರುಕಟ್ಟಿಸಬಲ್ಲದು. ಈ ಚಟ ಮನುಕುಲಕ್ಕೆ ಬಹಳ ದುಬಾರಿಯಾಗಬಲ್ಲದು. ★

## ಮುಚ್ಚಿಹೋದ ಸ್ತ್ರೀ ವಾದಿ ಪುಸ್ತಕದಂಗಡಿ

'ಸಿಸ್ಟರ್ ರೈಟ್' ಇಂಗ್ಲೆಂಡಿನ ಮೊಟ್ಟ ಮೊದಲ ಸ್ತ್ರೀ ವಾದಿ ಸಾಹಿತ್ಯದ ಪುಸ್ತಕದಂಗಡಿ. ಇಂಗ್ಲೆಂಡಿನಲ್ಲಿರುವ ಎರಡೇ ಎರಡು ಸ್ತ್ರೀ ವಾದಿ ಪುಸ್ತಕದಂಗಡಿಗಳಲ್ಲಿ ಒಂದಾದ 'ಸಿಸ್ಟರ್ ರೈಟ್' ಕಳೆದ ವರ್ಷ ಆಗಸ್ಟ್ ತಿಂಗಳಲ್ಲಿ ಅನಿವಾರ್ಯವಾಗಿ ಮುಚ್ಚಿ ಹೋಯಿತು. ಮುಗಿಯದಂತೆ ಮುಂದುವರೆದ ರಿಸೆಷನ್ ಕಾರಣವಾಗಿ ಮುಚ್ಚಬೇಕಾಗಿ ಬಂತು. ಭಾರೀ ಬಡ್ಡಿ ದರವನ್ನು ಭರಿಸಲಾರದೆ, ವಾರ್ಷಿಕ ತೆರಿಗೆ 500 ಪೌಂಡುಗಳಿಂದ 3000 ಪೌಂಡುಗಳಿಗೇರಿ, ಸ್ಪರ್ಧಾತ್ಮಕ ವಾಣಿಜ್ಯ ವ್ಯಾಪಾರದ ನಡುವೆ ನಿಲ್ಲಲಾರದ ಪರಿಸ್ಥಿತಿ ಮೂಡಿತು.

'ಸಿಸ್ಟರ್ ರೈಟ್'ನ ಉದ್ಯೋಗಿಗಳು ದೀರ್ಘಕಾಲ ತಮ್ಮ ಕೈಯಿಂದ ಸಾಧ್ಯವಿದ್ದಷ್ಟೂ ಹೋರಾಡಿ, ಈ ಪುಸ್ತಕದಂಗಡಿಯನ್ನು ಉಳಿಸಲು ಪ್ರಯತ್ನಿಸಿದ್ದುಂಟು. ಹೆಚ್ಚುವರಿ ಸಂಬಳ ಕೇಳದೆ, ರಜೆಯ ಸವಲತ್ತುಗಳನ್ನು ಉಪಯೋಗಿಸಿಕೊಳ್ಳದೆ, ಸ್ವಯಂಸೇವಕರನ್ನು ಬಳಸಿಕೊಂಡು ಹೆಣಗಾಡಿದರು. ಕಡೆಗೂ ಈ ಪುಸ್ತಕದಂಗಡಿ ಮುಚ್ಚಿಹೋದದ್ದು, ಮಹಿಳೆಯರ ಮಾತುಗಳಿಗೆ, ಸ್ತ್ರೀ ವಾದಿ ಸಿದ್ಧಾಂತಗಳಿಗೆ ತೆರೆದಿದ್ದ ಒಂದು ಕದ ಮುಚ್ಚಿದಂತಾಗಿದೆ.

## ಹೊಡೆತ, ಬಡಿತಕ್ಕೆ ಸಿಲುಕಿದ ಬ್ರಿಟನ್ನಿನ ಮಹಿಳೆಯರು

* ಬ್ರಿಟನ್ನಿನ ಒಂದು ಲಕ್ಷ ಹೆಂಗಸರು ಪ್ರತಿ ವರ್ಷ ತಮ್ಮ ಗಂಡಂದಿರಿಂದ ಹಿಂಸಾಚಾರಕ್ಕೆ ಒಳಗಾಗಿ ವೈದ್ಯಕೀಯ ನೆರವಿಗಾಗಿ ಧಾವಿಸುತ್ತಾರೆ.
* ಈ ದೇಶದ ರಾಜಧಾನಿಯಲ್ಲಿ ಕೊಲೆಯಾಗುವ ಅರ್ಧದಷ್ಟು ಹೆಂಗಸರನ್ನು ಅವರ ಜತೆ ವಾಸಿಸುವ ಗಂಡಸರೇ ಕೊಲೆ ಮಾಡುತ್ತಾರೆ.
* ಈ ದೇಶದ ರಾಜಧಾನಿಯಲ್ಲಿ ನಿರ್ವಸತಿಗ ಹೆಂಗಸದಲ್ಲಿ ಶೇಕಡ 40 ಮಂದಿಗೆ ಮನೆ ಇದ್ದು ಗಂಡನ ಹಿಂಸಾಚಾರ ತಾಳಲಾರದೆ ಓಡಿ ಬಂದವರು. ಕೃಪೆ : ಐಕ್ಯರಂಗ

# ಹೀಗೊಂದು ಅನುಭವ

★ ಸುಮಾ

> ಪುರುಷನದೆಂದು ಹೇಳಿಕೊಳ್ಳಲಾದ ಭದ್ರ ಕೋಟೆಗಳಿಗೆಲ್ಲಾ ಲಗ್ಗೆ ಹಾಕಿರುವ ಹೆಣ್ಣು ಇಂದು ಎಲ್ಲಾ ಕ್ಷೇತ್ರಗಳಲ್ಲೂ ತನ್ನ ಕಾಲಿರಿಸಿದ್ದಾಳೆ. ಆದರೂ ಈ ಹೊಸ ಕ್ಷೇತ್ರಗಳಲ್ಲಿ ಹೆಣ್ಣಾಗಿ ಅವಳು ಪಡೆಯುವ ಅನುಭವಗಳಲ್ಲಿ ವಿನೂತನತೆಯುಂಟು. ಪತ್ರಕರ್ತೆ ಜಿಲ್ಲಾ ವರದಿಗಾರಳೊಬ್ಬಳು ನಡುರಾತ್ರಿಯಲ್ಲಿ ತನ್ನ ವೃತ್ತಿಯನ್ನು ಸಮರ್ಥವಾಗಿ ನಿರ್ವಹಿಸಿದ ರೋಚಕ ಕತೆ ಇಲ್ಲಿದೆ.
>
> —ಸಂ.

ಅಂದು ಜೂನ್ 16. ರಾತ್ರಿ 10ರ ಸಮಯ. ಪ್ರಧಾನ ಕಚೇರಿಯಿಂದ ದೂರವಾಣಿ ಕರೆ ಬಂತು. 'ನಿಮ್ಮ ಜಿಲ್ಲೆಯಲ್ಲಿ ಎಲ್‌ಟಿಟಿಇಯವರು ಬಂದು ಸೇರಿಕೊಂಡಿದ್ದಾರಂತೆ. ಸ್ವಲ್ಪ ಕನ್‌ಫರ್ಮ್ ಮಾಡಿಕೊಳ್ಳಿ' ಎಂದು ಮುಖ್ಯ ವರದಿಗಾರರು ಹೇಳಿದರು.

ಎಲ್‌ಟಿಟಿಇಯವರಲ್ಲಿ ಈ ಜಿಲ್ಲೆಯಲ್ಲಿ ಎಂದು ಒಮ್ಮೆ ದಂಗಾದರೂ ತಮಿಳುನಾಡಿಗೆ ತಾಗಿಯೇ ಇರುವ ಇಲ್ಲಿಗೆ ಅವರು ಯಾಕೆ ಬರಬಾರದು ಎಂದು ಪ್ರಶ್ನಿಸಿಕೊಂಡೆ. ರಾಜೀವ್‌ಗಾಂಧಿಯ ಕೊಲೆಯಾದ ವರ್ಷವದು. ಜಿಲ್ಲೆಯ ಜಲವಿದ್ಯುತ್ ಘಟಕ, ಬೃಹತ್ ಅಣೆಕಟ್ಟುಗಳಿಗೆ ಸಂಪೂರ್ಣ ರಕ್ಷಣೆ ಒದಗಿಸಲಾಗಿತ್ತು. ಪೊಲೀಸ್ ವರಿಷ್ಠಾಧಿಕಾರಿ ಇದರ ಉಸ್ತುವಾರಿ ವಹಿಸಿಕೊಂಡಿದ್ದರು. ಹಾಗಾಗಿ ಅಂದು ಸುದ್ದಿ ದೃಢಪಡಿಸಿಕೊಳ್ಳಲು ಅವರು ಸಿಗಲಿಲ್ಲ. ಅವರ ನಂತರದ ಅಧಿಕಾರಿಯನ್ನು ಕೇಳಿದಾಗ 'ನಿಮಗೇನೋ ಹುಚ್ಚು. ರಾತ್ರಿ ಈ ಹೊತ್ತಿನಲ್ಲಿ ಹೀಗೆ ಕೇಳುತ್ತಿದ್ದೀರಲ್ಲ ಎಂದು ನಕ್ಕರು. ಕೊನೆಗೆ ಜಿಲ್ಲಾಧಿಕಾರಿಗಳನ್ನು ಸಂಪರ್ಕಿಸಿದೆ. 'ಏನು ಎಲ್‌ಟಿಟಿಇಯವರೆ?' ದಂಗಾಗಿ ಕೇಳಿದರು. ಲೈನಿನಲ್ಲಿ ಹಾಗೆ ಇರಿ ಕೇಳುತ್ತೇನೆ ಎಂದು ಪೊಲೀಸ್ ನಿಸ್ತಂತು ವಿಭಾಗದವರೊಂದಿಗೆ ಮಾತನಾಡುತ್ತಿದ್ದರು. ನಾನು ಫೋನ್ ಹಿಡಿದೇ ಇದ್ದುದರಿಂದ ಜಿಲ್ಲಾಧಿಕಾರಿ ಮಾತನಾಡುವುದು ಕೇಳುತ್ತಿತ್ತು. ಅವರ ಮಾತಿನಿಂದ ಏಳು ಜನ ಎಲ್‌ಟಿಟಿಇ ಅವರನ್ನು ಸಂಜೆ 6ರ ಹೊತ್ತಿಗೆ ಪೋಲಿಸರು ಹಿಡಿಯಲು ಯತ್ನಿಸಿದಾಗ ಅವರು ಆತ್ಮಹತ್ಯೆ ಮಾಡಿಕೊಂಡರೆಂದು ಗೊತ್ತಾಯಿತು. ಜಿಲ್ಲಾಧಿಕಾರಿಗಳು ನನಗೆ "ಈಗಲೇ ಸುದ್ದಿ ಮಾಡಬೇಡಿ ನಾನು ಸ್ಥಳಕ್ಕೆ ಹೋಗಿ ಬರುತ್ತೇನೆ" ಎಂದು ಫೋನಿಟ್ಟರು.

ಕೊನೆಗೂ ನಾನು ಗುಪ್ತ ದಳದ ಅಧಿಕಾರಿಯನ್ನು ಸಂಪರ್ಕಿಸಿದೆ. ಮುತ್ತತ್ತಿಯಲ್ಲಿ ಪೊಲೀಸರು ದಾಳಿ ನಡೆಸಿದಾಗ ಏಳು ಜನ ಎಲ್‌ಟಿಟಿಇಯವರು ಆತ್ಮಹತ್ಯೆ ಮಾಡಿಕೊಂಡರು ಎಂದು ಅವರ ಹೆಸರನ್ನು ಕೊಟ್ಟರು. ಇನ್ನಿಬ್ಬರು ತಪ್ಪಿಸಿಕೊಂಡಿದ್ದಾರೆ ಎಂದರು.

ಮೊದಲ ಪುಟದ ಸುದ್ದಿ ಇದು ಎಂದು ಬರೆದುಕೊಂಡು ಪ್ರಧಾನ ಕಚೇರಿಗೆ ಫೋನ್ ಮಾಡಿದೆ. 'ನಿಮ್ಮ ಪಕ್ಕದ ಜಿಲ್ಲೆ ಪ್ರತಿನಿಧಿ ಸ್ಥಳಕ್ಕೆ ಹೋಗಿದ್ದಾರೆ. ನೀವು ಸುದ್ದಿ ಕೊಡುವ ಅಗತ್ಯವಿಲ್ಲ' ಎಂದು ಅಲ್ಲಿಂದ ಉತ್ತರ ಬಂತು. ಈ ಉತ್ತರದಿಂದ ನನಗೆ ನೋವಾಯಿತು. ಮರು ಯೋಚಿಸದೆ ಹಣವನ್ನು ಎಣಿಸಿಕೊಂಡೆ. ಪುನಃ ಗುಪ್ತ ದಳದ ಅಧಿಕಾರಿಗೆ ಫೋನ್ ಮಾಡಿ ಮುತ್ತತ್ತಿ ಯಾವ ತಾಲ್ಲೂಕಿನಲ್ಲಿದೆ, ಎಷ್ಟು ದೂರದಲ್ಲಿದೆ ಎಂದು ವಿವರ ಪಡೆದುಕೊಂಡೆ. ರಾತ್ರಿ 11 ದಾಟಿದೆ. ನೀವು ಅಲ್ಲಿಗೆ ಹೋಗುವ ಪ್ರಯತ್ನ ಮಾಡಬೇಡಿ ಎಂದರು.

ಕಾರು ನಿಲ್ದಾಣದಲ್ಲಿ ಬಾಡಿಗೆಗೆ ಒಂದು ಕಾರೂ ಸಿಗಲಿಲ್ಲ. ಬಸ್ ನಿಲ್ದಾಣಕ್ಕೆ ಬಂದೆ. ಅಲ್ಲಿ ಬದಿಯಲ್ಲಿ ಕಾರೊಂದು ನಿಂತಿತ್ತು. ಅದರ ಬಾಗಿಲನ್ನು ಜೋರಾಗಿ ಬಡಿದೆ. ಒಳಗೆ ನಿದ್ರಿಸುತ್ತಿದ್ದ ಚಾಲಕ ಎದ್ದ. "ತುರ್ತಾಗಿ ಮುತ್ತತ್ತಿಗೆ ಹೋಗಬೇಕು 'ಬರುತ್ತೀರಾ ?" ಕೇಳಿದೆ. ಈ ರಾತ್ರಿ ಆ ಕಾಡಿರುವ ಊರಿಗೆ ಆಗೋಲ್ಲವೆಂದು ಹೇಳಿದ. "ನೋಡಿ, ರಾಜೀವ್ ಗಾಂಧಿಯನ್ನು ಕೊಲೆ ಮಾಡಿದವರು ಅಲ್ಲಿದ್ದಾರೆ. ದಯವಿಟ್ಟು ಬನ್ನಿ" ಎಂದು ಗೋಗರೆದೆ. ಬಹುಶಃ ನಾನು ಅಂಗಾಲಾಚಿದ್ದರಿಂದ ಅವನು ಮನಸ್ಸು ಬದಲಿಸಿದನೋ ಏನೊ ಸರಿ ಎಂದ. ಕಾರು ಬಾಡಿಗೆ 500 ರೂ. ಕೊಡಬೇಕು. ಮುತ್ತತ್ತಿ ದಟ್ಟವಾದ ಕಾಡಿನೊಳಗಿದೆ. ಆನೆಗಳು ಹಗಲು ಹೊತ್ತಿನಲ್ಲಿ ಓಡಾಡುತ್ತಿರುತ್ತವೆ. ಇನ್ನು ರಾತ್ರಿ ಕೇಳಬೇಕೆ ? ಆನೆಗಳು ಕಾರಿಗೆ ಜಖಂ ಮಾಡಿದರೆ ಅದರ ಖರ್ಚನ್ನು

ನೀವೇ ಕೊಡಬೇಕು. ಜೀವಕ್ಕೆ ಅಪಾಯವಾದರೆ ನಾನು ಮುತ್ತತ್ತಿವರೆಗೆ ಕಾರು ಓಡಿಸುವುದಿಲ್ಲ. ಎಂದೆಲ್ಲಾ ಷರತ್ತುಗಳನ್ನು ಹಾಕಿದ. ಎಲ್ಲದಕ್ಕೂ ಒಪ್ಪಿಕೊಂಡು ಕಾರು ಏರಿದೆ.

ಹಲಗೂರಿಗೆ ತಲುಪಿದಾಗ 12-30 ಆಗಿತ್ತು. ಪಕ್ಕದ ಜಿಲ್ಲೆಯ ನನ್ನ ಸಹೋದ್ಯೋಗಿ ಅಲ್ಲಿನ ಪೊಲೀಸ್ ಠಾಣೆಗೆ ಬಂದಿರಬಹುದು ಎನಿಸಿತು. ಪೊಲೀಸರಿಂದ ಸುದ್ದಿ ನಮಗೆ ಇವತ್ತಲ್ಲ ನಾಳೆ ಸಿಕ್ಕಿಯೇ ಸಿಗುತ್ತದೆ. ಆದರೆ ಮುತ್ತತ್ತಿಯಲ್ಲಿ ಇದನ್ನು ಕಣ್ಣಾರೆ ನೋಡಿದ ಜನ ನಾಳೆಗೆ ಹೇಳುತ್ತಾರೋ ಇಲ್ಲವೋ ಎಂದು ಯೋಚಿಸಿ ಪೊಲೀಸ್‌ಠಾಣೆಗೆ ಹೋಗದೆ ನೇರವಾಗಿ ಮುತ್ತತ್ತಿಗೆ ಕಾರು ಬಿಡಲು ಚಾಲಕನಿಗೆ ಹೇಳಿದೆ.

ದಾರಿಯಲ್ಲಿ ವಿದ್ಯುತ್ ದೀಪಗಳಿಲ್ಲ. ಗಾಂಡಾಂಧ ಕಾರ. ಹಾಗಾಗಿ ಮುತ್ತತ್ತಿಯ ದಾರಿ ದಟ್ಟ ಅರಣ್ಯ ದೊಳಗಿದೆಯೆ ಅಥವಾ ಕುರುಚಲು ಕಾಡೊಳಗಿದೆಯೆ ಎಂಬುದೂ ಗೊತ್ತಾಗುತ್ತಿರಲಿಲ್ಲ. ಚಾಲಕ ಅಂಜಿ ಕೊಂಡಂತೆ ದಾರಿಗೆ ಅಡ್ಡವಾಗಿ ಕಾಡಾನೆಗಳು ಬರಲಿಲ್ಲ. ಸುಮಾರು 1-30ರ ವೇಳೆಗೆ ಮುತ್ತತ್ತಿ ತಲುಪಿದ್ದಾಯಿತು. ಒಂದು ಸಾರಿಗೆ ಬಸ್ ಬಿಟ್ಟರೆ ಏನೂ ಇರಲಿಲ್ಲ. ಇಲ್ಲಿ ಯಾವ ಘಟನೆಯೂ ನಡೆದಿಲ್ಲ ಎಂದು ಹೇಳುವಂತೆ ಮೌನ ಆವರಿಸಿತ್ತು. ಕಾವೇರಿ ನದಿ ಹರಿಯುವ ಜುಳು-ಜುಳು ಶಬ್ದ ಬಿಟ್ಟರೆ ಮತ್ತೆಲ್ಲ ನಿಶ್ಶಬ್ದವಾಗಿತ್ತು. ಹತ್ತು ಹನ್ನೆರಡು ಮನೆಗಳ ಆ ಪುಟ್ಟ ಹಳ್ಳಿಯಲ್ಲಿ ಜನರೆಲ್ಲ ನಿದ್ದೆ ಹೋದಂತೆ ಕಾಣುತ್ತಿತ್ತು. ಕೊನೆಗೂ ಒಂದು ಮನೆಯ ಬಾಗಿಲು ತಟ್ಟಿದೆ. ಒಳಗಿಂದ ಒರಟಾಗಿ "ಯಾರು ?" ಪುರುಷ ಧ್ವನಿ ಕೇಳಿತು. "ನಾನು ಬೇರೆ ಊರಿನಿಂದ ಬಂದಿದ್ದೇನೆ. ದಯವಿಟ್ಟು ಬಾಗಿಲು ತೆಗೆಯಿರಿ" ಮನವಿ ಮಾಡಿಕೊಂಡೆ. "ಈ ಅಪ ರಾತ್ರಿಯಲ್ಲಿ ಹೀಗೆಲ್ಲ ಹೆಂಗಸರು ಬರೋದು ಅಂದರೆ ಅರ್ಥವೇನು" ಎಂದು ಗಡುಸಾಗಿಯೇ ಹೇಳಿಕೊಂಡ ವ್ಯಕ್ತಿ ಬಾಗಿಲು ತೆರೆದರು. ಇಷ್ಟೇ ಸಾಕೆಂದು ಮನೆ ಹೊಸ್ತಿಲು ದಾಟಿ ಒಳಗೆ ನಿಂತೆ ಚಾಲಕ ಹೊರಗೆ ನಿಂತು ನೋಡುತ್ತಿದ್ದ. "ಇಲ್ಲಿ ಎಲ್‌ಟಿಟಿಇಯವರು ಇದ್ದಾರೆಯೋ" ಎಂದು ಪ್ರಶ್ನಿಸಿದೆ. ಗೊತ್ತಿಲ್ಲವೆಂದರು. ನೋಡಿ, ನಾನು ಪತ್ರಿಕೆಯಿಂದ ಬಂದಿದ್ದೇನೆ. ಇಲ್ಲಿ ಎಲ್‌ಟಿಟಿಇಯವರು ಇದ್ದರೆಂದು ಸುದ್ದಿ ಬಂದಿದೆ. ದಯವಿಟ್ಟು ಹೇಳಿ, ಸಹಕರಿಸಿ" ಎಂದು ಮತ್ತೆ ಕೇಳಿಕೊಂಡೆ. "ನೋಡಿ, ಎದುರು ಸಾಲಿನ ಮಧ್ಯದ ಮನೆಯಲ್ಲಿದ್ದರು. ಆ ಮನೆ ಮಾಲೀಕರು ಪಕ್ಕದ ಮನೆಯವರು" ಎಂದು ತಿಳಿಸಿದರು. "ನೀವು ಪತ್ರಿಕೆಯವರು ಎಂದು ಹೇಗೆ ನಂಬಲಿ. ಗುರುತಿನ ಚೀಟಿ ಇದೆಯಾ" ಎಂದು ಅವರು ಪ್ರಶ್ನಿಸಿದರು. ಗುರುತಿನ ಚೀಟಿ ತೋರಿಸಿ ಮನೆಯಿಂದ ಹೊರಬಿದ್ದೆ. ಎಲ್‌ಟಿಟಿಇಯವರಿದ್ದ ಮನೆ ಒಂದು ಸಣ್ಣ ಕೊಠಡಿಯಷ್ಟೆ. ಮೇಲಿನ ಹೆಂಚು ಕೆಲವನ್ನು ತೆಗೆಯಲಾಗಿತ್ತು. ಬಾಗಿಲಿಗೆ ಬೀಗ ಹಾಕಿತ್ತು. ಒಳಗೆ ವಿದ್ಯುತ್ ದೀಪ ಉರಿಯುತ್ತಿತ್ತು. ಬಾಗಿಲ ಸಂದಿಯಿಂದ ಇಣುಕಿದೆ. ಒಂದಷ್ಟು ಪುಸ್ತಕಗಳ ರಾಶಿ ಮಾತ್ರ ಕಾಣುತ್ತಿತ್ತು. ಇನ್ನೇನು ಮಾಡುವುದೆಂದು ಈ ಮನೆ ಮಾಲಿಕರ ಮನೆ ಬಾಗಿಲು ತಟ್ಟಿದೆ. 'ರಾಜೀವ್‌ಗಾಂಧಿ ಕೊಲೆ ಮಾಡಿದವರು ಬಾಗಿಲು ತಟ್ಟುತ್ತಿದ್ದಾರೆ' ಎಂದು ಅವರು ಚೀರುತ್ತಿದ್ದರು ಅವರೆಲ್ಲ. "ನಾನು ಪತ್ರಿಕೆಯಿಂದ ಬಂದಿದ್ದೇನೆ. ದಯವಿಟ್ಟು ಹೊರಗೆ ಬನ್ನಿ. ನಿಮಗೇನೂ ಮಾಡುವುದಿಲ್ಲ" ಎಂದು ಹೇಳಿದೆ. ಅವರು ಮಗನೊಂದಿಗೆ ಹೊರಗೆ ಬಂದರು. ಅವರು ಅಳುತ್ತಿದ್ದರು. "ನಂಗೊತ್ತಿಲ್ಲ. ತಾಯಿ ಬಾಡಿಗೆಗೆ ಕೋಣೆ ಬೇಕು ಅಂದರು. ಕಾರ್ತಿಕ ಸೋಮವಾರಕ್ಕೆ ಪೂಜೆಗೆ ಬಂದಿದ್ದಾರೆಂತ ತಿಳಿದು ಬಾಡಿಗೆಗೆ ಕೊಟ್ಟೆ" ಎಂದು ಹೇಳಿದರು. ಅವರ ಮಗನೂ ಭಯದಿಂದ ನಡುಗುತ್ತಿದ್ದ. ರಣಧೀರ ಪಡೆ ಅಪ್ಪಾಜಿಗೌಡರು ಕರಕೊಂಡು ಬಂದು ಬಾಡಿಗೆಗೆ ಕೊಡೀಂತ ಹೇಳಿದರು. ಇವರು ಇಲ್ಲಿ ಬಾಡಿಗೆಗೆ ಹಿಡಿದರು. ಇನ್ನೊಂದಷ್ಟು ಜನ ಬೇರೂರಿಗೆ ಹೋದರು ಎಂದು ಅವನು ಹೇಳಿದ.

ಅಷ್ಟರಲ್ಲಿ ಪೊಲೀಸ್ ವ್ಯಾನ್ ಬಂತು. ಸಶಸ್ತ್ರ ಪೊಲೀಸರು ಕೆಳಗಿಳಿದರು. ಸುತ್ತುವರಿದರು. ಕಾರು ಚಾಲಕ, ಮನೆ ಮಾಲೀಕ, ಅವರ ಮಗ ಎಲ್ಲರೂ ಭಯದಿಂದ ಮೂಕರಾಗಿದ್ದರು. ಇದೇನು ಹೀಗೆ ಎಂದು ಪ್ರಶ್ನಿಸಿಕೊಳ್ಳುತ್ತಿದ್ದೆ. "ಮೇಡಂ ನೀವಾ ? ಏನು ಕೆಲಸ ಮಾಡಿಬಿಟ್ಟಿರಿ. ನಮಗೆ ರಾಷ್ಟ್ರಮಟ್ಟದಲ್ಲಿ ಬರುತ್ತಿದ್ದ ಹೆಸರು ತ್ಯಜಿಸಿ ಬಿಟ್ಟಿರಿ. ಶುಭಾ, ಶಿವರಸನ್ ಎಂದು ಹೇಳಿ ಹಿಡಿಯಲು ಬಂದರೆ ಇಲ್ಲಿ ನೀವಿದ್ದೀರಿ" ಎಂದು ಹುಚ್ಚು ಹಿಡಿದು ನಗ ಹೊರಟರು. ಕೊನೆಗೂ ಪರಿಸ್ಥಿತಿ ಅರಿವಾಗಿ ಎಲ್ಲರೂ ನಕ್ಕರು. ಅವರು ಕೊಠಡಿ ಬಾಗಿಲು ತೆಗೆದು ಅಲ್ಲಿರುವ ಸಾಮಗ್ರಿಗಳನ್ನು ನೋಡಲು ಅವಕಾಶ ಕೊಟ್ಟರು. ಯಾವುದನ್ನೂ ಮುಟ್ಟಬೇಡಿ ಎಂದರು. ಸಯನೈಡ್ ಸೇವಿಸಿ ಜೀವ ಹೋಗುವ ಸಂಕಟದಲ್ಲೂ ಎಲ್‌ಟಿಟಿಇ ಹುಡುಗರು ವಾಂತಿ, ಕಕ್ಕಸು ಮಾಡಿಕೊಂಡಿದ್ದರು. ಕೃತಕ ಕಾಲು, ಬಟ್ಟೆ, ಪುಸ್ತಕ ಚೆಲ್ಲಾಪಿಲ್ಲಿಯಾಗಿ

ಬಿದ್ದಿದ್ದುವು. ಬದನೆಕಾಯಿ ಪಾಲ್ಯ ಬಾಂಡಲೆಯಲ್ಲಿತ್ತು. ಪೊಲೀಸ್ ಅಧಿಕಾರಿ ಮುಂದೆ ಹೋಗದಂತೆ ನನ್ನನ್ನು ತಡೆದರು. ನೋಡಿ ಇವು ಸಯನೈಡ್ ಕ್ಯಾಪ್ಸಲ್ಸ್ ಮುಟ್ಟಿದರೆ ಗಾಜು ಒಡೆದು ಸಯನೈಡ್ ದೇಹ ಸೇರಬಹುದೆಂದು ಎಚ್ಚರಿಸಿದರು.

ಇವನ್ನೆಲ್ಲ ಬರೆದುಕೊಂಡು ಹೊರಗೆ ಬರುವಾಗ ಕಾರ್ತಿಕ ಸೋಮವಾರ (ಮರುದಿನ)ದ ಹಬ್ಬಕ್ಕೆಂದು ಪರ ಊರಿನಿಂದ ಬಂದ ಹುಡುಗರು (ದೇವಸ್ಥಾನದ ಪಡಸಾಲೆಯಲ್ಲಿ ಮಲಗಿದ್ದವರು) ಸುತ್ತು ಹಾಕಿಕೊಂಡು ಏನಾಯಿತು. ಎಲ್‌ಟಿಟಿಇಯವರನ್ನು ಯಾರು ಹಿಡಿದರು ಎಂಬುದನ್ನು ವಿವರಿಸಿದರು. ಅವರಲ್ಲಿ ಇಬ್ಬರನ್ನು ಎಲ್‌ಟಿಟಿಇ ಹುಡುಗರೆಂದು ಪೊಲೀಸರು ಎಳೆದುಕೊಂಡು ವ್ಯಾನ್‌ನಲ್ಲಿ ಕುಳ್ಳಿರಿಸಿದ್ದರಂತೆ. ಕೊನೆಗೆ ಬಿಟ್ಟರು. ಅವರಲ್ಲಿ ತಮ್ಮ ಅನುಭವ ಹೇಳಿಕೊಂಡರು. ಆ ವೇಳೆಗೆ ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿ ಬಂದು ತಲುಪಿದರು. ಬೆಳಗಿನ ಜಾವ ಮೂರರ ವೇಳೆಗೆ ಮೈಸೂರಿನ ಪತ್ರಕರ್ತರು, ನಮ್ಮ ಜಿಲ್ಲಾಧಿಕಾರಿಗಳು ಅಲ್ಲಿಗೆ ಬಂದು ತಲುಪಿದರು.

ಪೊಲೀಸರು ಸಮಯ ಹಾಳು ಮಾಡದೆ ಬೇರೂರಿನ ತಂಡವನ್ನು ಹಿಡಿಯಲು ಅಲ್ಲಿಂದ ಜಾಗ ಖಾಲಿ ಮಾಡಿದ್ದರು. ವಾಸ್ತವವಾಗಿ ಎಲ್‌ಟಿಟಿಇಯವರನ್ನು ಪತ್ತೆ ಮಾಡಿದವರು, ಹಿಡಿದವರು ಅತ್ಯುತ್ಸಾಹದಿಂದ ತಮ್ಮ ಅನುಭವಗಳನ್ನು ಹಂಚಿಕೊಳ್ಳುತ್ತಿದ್ದರು. ಈ ಅನುಭವದಿಂದ ಮಾತ್ರ ಪತ್ರಕರ್ತರು ಸಂಪೂರ್ಣ ವಂಚಿತರಾಗಿದ್ದೆವು. ನಮಗೆ ನೋಡಲು ಸಿಕ್ಕಿದ್ದು ಆತ್ಮಹತ್ಯೆ ಮಾಡಿಕೊಂಡ ಎಲ್‌ಟಿಟಿಇ ಹದಿಹರೆಯದ ಹುಡುಗರ ಹೆಣಗಳ ರಾಶಿ ಮಾತ್ರ !

ಕಾರಿನ ಚಾಲಕ "ನನಗೆ ಇದನ್ನು ನೋಡುವ ಒಳ್ಳೆ ಅವಕಾಶ ಮಾಡಿಕೊಟ್ರಿ. ನಾನು ತುಂಬ ಹೆದರಿದ್ದೆ, ಕಾಡು ದಾರಿಯಲ್ಲಿ ಮುತ್ತತ್ತಿಗೆ ಹೋಗುತ್ತಿದ್ದಾಗ ಎದೆ ಬಡಿದುಕೊಳ್ಳುತ್ತಿತ್ತು. ನಿಮ್ಮನ್ನು ನೋಡಿ ಧೈರ್ಯ ತಂದುಕೊಂಡೆ" ಎಂದು ಕೃತಜ್ಞತೆಯಿಂದ ಹೇಳಿದ.

ಇಂಥ ಸನ್ನಿವೇಶದಲ್ಲಿ ಯಾರೇ ಪತ್ರಕರ್ತರಿದ್ದರೂ ಸ್ಥಳಕ್ಕೆ ಹೋಗುತ್ತಿದ್ದರು. ಇದರಲ್ಲಿ ಯಾವ ಹೆಚ್ಚುಗಾರಿಕೆಯೂ ಇಲ್ಲ. ಆದರೆ ಇಂಥ ಅನುಭವ ಎಲ್ಲರಿಗೂ ಸಿಗುವುದಿಲ್ಲ. ಸಿಕ್ಕಿದವರು ಬಿಟ್ಟುಕೊಡುವುದಿಲ್ಲ. ಸಂಪೂರ್ಣ ಅನುಭವಿಸುತ್ತಾರೆ.

---

# ಹೆಣ್ಣಿನ ಗರ್ಭದ ಸುತ್ತ...

★ ಎನ್. ಸಿ.

ಸುಮಾರು ಒಂದೂವರೆ ದಶಕದ ಹಿಂದಿನ ಮಾತು. ನನ್ನ ಗೆಳತಿಯ ಅಕ್ಕನಿಗೆ ಇಬ್ಬರು ಮಕ್ಕಳಿದ್ದರು. ಒಳ ಒಳಗಿನ ವಿವಾಹ, ಸೋದರಿಕೆ ಸಂಬಂಧ, ಹುಟ್ಟಿದ ಇಬ್ಬರೂ ಬುದ್ಧಿಮಾಂದ್ಯ ಮಕ್ಕಳು. ಮೊದಲ ಮಗು ಗಂಡಾಗಿದ್ದು, ಐದನೇ ವರ್ಷಕ್ಕೆ ತೀರಿಕೊಂಡಿತ್ತು. ಎರಡನೆಯ ಮಗು ಹೆಣ್ಣು, ಸುಮಾರು 12–13 ವರ್ಷದ್ದು, ದೈಹಿಕವಾಗಿ ಗಟ್ಟಿಮುಟ್ಟಾಗಿದ್ದರೂ, ಮಾನಸಿಕವಾಗಿ ಮೂರ್ನಾಲ್ಕು ವರ್ಷದ ಮಗುವಿನ ಮನಸ್ಸು. ಆ ಹುಡುಗಿಯ ಆರೈಕೆಯಲ್ಲಿ ಮನೆಬಿಟ್ಟು ಕದಲದ ತಾಯಿಗೆ ಹೊರಬದುಕಿನ ಸಂಪರ್ಕವೇ ಕಳೆದುಹೋಗಿತ್ತು. ಇನ್ನು ಇದು 'ದೊಡ್ಡದಾದರೆ' ಹೇಗೆ ಸಂಬಾಳಿಸೋದು ಎಂಬ ಆತಂಕ ತಾಯಿಯದು. ಬುದ್ಧಿ ಬೆಳೆಯದಿದ್ದರೂ ದೇಹವಂತೂ ಬಲಿಯಿತು. ಹುಡುಗಿ ಹೊರಗೆ ಕೂತಳು. ತಿಳಿಯದ ಹುಡುಗಿಯ ಆ ಮುಟ್ಟಿನ ದಿನಗಳ ಫಜೀತಿ ವಿಪರೀತವಿತ್ತು. 'ಹೇಲೂ ಉಚ್ಚೆ ಬಾಚಬಹುದು, ಈ ಹಿಂಸೆ ಮಾತ್ರ ಯಾರಿಗೂ ಬೇಡ' ಎನ್ನುತ್ತಿದ್ದ ಮಾತುಗಳು ನೆನಪಿವೆ.

ನನ್ನ ಪರಿಚಯದ ವೃತ್ತದಲ್ಲಿ ಇಬ್ಬರೋ–ಮೂವರೋ ಬುದ್ಧಿಮಾಂದ್ಯ ಹೆಣ್ಣು ಮಕ್ಕಳನ್ನು ನೋಡಿದ್ದೇನೆ. ಕೆಲವರಲ್ಲಿ ವ್ಯವಹಾರ ಜ್ಞಾನ–ಕಲಿಕೆಯ ಸಾಮರ್ಥ್ಯ ಇಲ್ಲದಿದ್ದರೂ ತಮ್ಮ ವೈಯಕ್ತಿಕ ಅಗತ್ಯಗಳನ್ನು ಪೂರೈಸಿಕೊಳ್ಳುವಷ್ಟು ತಿಳುವಳಿಕೆ ಇದೆ. "ಸ್ವಲ್ಪ ಹುಡುಗಿ ಮಂಕು, ಇಲ್ಲ ಪೆದ್ದು" ಎನ್ನುವಂತೆ ಮಾತ್ರ ಕಾಣುತ್ತಾರೆ. ಆದರೆ ಮತ್ತೆ ಕೆಲವು ಕೇಸುಗಳಲ್ಲಿ ಏನೊಂದೂ ಅರ್ಥವಾಗದೆ, ಮಾನಸಿಕವಾಗಿ–ಬೌದ್ಧಿಕವಾಗಿ ಶೈಶಾವಸ್ಥೆಯಲ್ಲೇ ಉಳಿದುಬಿಟ್ಟಿರುವ ಅವಾಯಕರಿದ್ದಾರೆ. 'ಹೇಲು ಹುಚ್ಚೆ ಆದರೂ ಬಾಚಬಹುದು. ಆದರೆ....' ಆ ತಾಯಿಯ ಸಂಕಟದ ಮಾತುಗಳು 'ಏನಾದರೂ ಹೆಚ್ಚು ಕಮ್ಮಿ ಆದರೆ....' ಎಂಬ ಆತಂಕದ ದನಿ ನೆನಪಾಗುತ್ತದೆ. ಇಂಥಾ ಮಕ್ಕಳ ಹೊರೆ ಸಂಪೂರ್ಣವಾಗಿ ತಾಯಂದಿರ ಮೇಲೆ ಬೀಳುತ್ತದೆ. ಇಂಥಾ ಎಷ್ಟೋ ಮಕ್ಕಳ ತಾಯಿ–ತಂದೆಯರು ಗರ್ಭಾಶಯವನ್ನು ತೆಗೆಸಿರುವ ಪ್ರಸಂಗಗಳು ಇತ್ತೀಚೆಗೆ ತಿಳಿದು ಬಂದಿದೆ.

ಫೆಬ್ರುವರಿ ತಿಂಗಳಲ್ಲಿ ಪೂನಾದಲ್ಲಿಯ ಬುದ್ಧಿಮಾಂದ್ಯ ಹೆಣ್ಣುಮಕ್ಕಳಿಗಾಗಿ ನಡೆಸುವ ಸರಕಾರಿ ಆಸ್ಪತ್ರೆ

ಯಲ್ಲಿ, ಹಲವು ಹೆಣ್ಣುಮಕ್ಕಳ ಗರ್ಭಾಶಯವನ್ನು ಶಸ್ತ್ರ ಕ್ರಿಯೆಯ ಮೂಲಕ ತೆಗೆದು ಹಾಕಿಸಿದ್ದು ದೊಡ್ಡ ವಿವಾದಕ್ಕೆ ಕಾರಣವಾಗಿದೆ. ಅನೇಕ ಮಹಿಳಾ ಸಂಘ, ಸಂಸ್ಥೆಗಳು ಇದನ್ನು ತೀವ್ರವಾಗಿ ವಿರೋಧಿಸಿವೆ. 'ಇಂಥಾ ಕ್ರಮ ಅನೈತಿಕ, ಇದರಿಂದ ಈ ಮಹಿಳೆಯರನ್ನು ಲೈಂಗಿಕವಾಗಿ ಶೋಷಿಸಲು ರಹದಾರಿಯಾಗುತ್ತದೆ' ಎಂಬ ವಾದಗಳನ್ನೂ ಮುಂದಿಟ್ಟಿದ್ದಾರೆ.

ಇರುವ ಪರಿಸ್ಥಿತಿಯಲ್ಲಿ ಇಂಥಾ ನಿರ್ಧಾರಗಳು ತಪ್ಪೆನಿಸಬೇಕೆ ? ಮೂರು ವರ್ಷದ ಮಗು ಮುಟ್ಟಾದರೆ ಹೇಗಿರುತ್ತದೆ ಯೋಚಿಸಿ. ಅಥವಾ ಮೂರು ವರ್ಷದ ಮಗುವಿನ ಮೇಲೆ ಬಸಿರ ಹೊರೆ ಹೇಗಿದ್ದೀತು. ಹುಟ್ಟುವ ಕೂಸಿನ ಭವಿಷ್ಯ ಏನಿದ್ದೀತು. ಅಥವಾ ಗರ್ಭಾಶಯ ಇದ್ದ ಒಂದೇ ಕಾರಣಕ್ಕೆ ಲೈಂಗಿಕವಾಗಿ ಶೋಷಿಸಲ್ಪಡುವುದಿಲ್ಲ ಎಂಬ ಭರವಸೆ ಇದೆಯೆ ? ಲೈಂಗಿಕ ಶೋಷಣೆಯೊಡನೆ ಗರ್ಭಧಾರಣೆಯ ಹೊರೆಯನ್ನೂ ಹೇರುವುದು ಮತ್ತೂ ಅಮಾನವೀಯವಾಗದೆ ? ಲೈಂಗಿಕ ಶೋಷಣೆಯನ್ನು ತಡೆಗಟ್ಟುವತ್ತ ಖಂಡಿತವಾಗಿ ಎಲ್ಲರ ಒತ್ತಾಯ ವಿರಬೇಕು. ಅದೇ ಸಮಯದಲ್ಲಿ ಸದ್ಯದ ವಾಸ್ತವ ಸಮಾಜ ತಟ್ಟನೆ ಬದಲಾಗುವುದೆಂದು ಸುಧಾರಿಸುವುದೆಂದು ಕನಸು ಕಾಣುವುದು ತಪ್ಪಾಗುವುದು. ಮಗುವಿನ ಮನಸ್ಸಿನ ಈ ಹುಡುಗಿಯರು ಒಂದು ಬಿಸ್ಕತ್ತು ತೋರಿಸಿದರೂ ಓಡಿ ಬರುವಾಗ ಅವರ ಮೇಲಿನ ಶೋಷಣೆಯನ್ನು ತಡೆಗಟ್ಟಲು ಗರ್ಭಾಶಯ ಉಳಿಸುವುದು ಹೇಗೆ ಉತ್ತರವಾದೀತು. ಈ ಶಸ್ತ್ರಕ್ರಿಯೆಯ ಮೂಲಕ ಆಸ್ಪತ್ರೆಗಳು ತಮ್ಮ ಜವಾಬ್ದಾರಿಯಿಂದ ಜಾರಿಕೊಳ್ಳುತ್ತವೆಂದು ತೀರ್ಮಾನಿಸುವುದು ಕೂಡಾ ವಿಪರೀತವಾಗಿ ಕಾಣಿಸುತ್ತದೆ. ಗರ್ಭಾಶಯವನ್ನು ತೆಗೆದ ಹೆಣ್ಣುಮಕ್ಕಳು ತೀವ್ರತರದ ಬುದ್ಧಿಮಾಂದ್ಯತೆಗೆ ಗುರಿಯಾಗಿದ್ದು, ತಮ್ಮ ವೈಯಕ್ತಿಕ ನೈರ್ಮಲ್ಯವನ್ನು ಕಾಪಾಡಿಕೊಳ್ಳಲು ಅಸಮರ್ಥರಿದ್ದರು. ಅವರ ಬುದ್ಧಿಮಟ್ಟ ಎರಡರಿಂದ ನಾಲ್ಕು ವರ್ಷದ ಮಗುವಿನಷ್ಟಿತ್ತು. ಒಪ್ಪಿಗೆ ತಾಯ್ತಂದೆಯರ ಒಪ್ಪಿಗೆ ದೊರೆತಿದ್ದು, ವೈದ್ಯರು, ಮನಃಶಾಸ್ತ್ರಜ್ಞರು ಪರಿಶೀಲಿಸಿ ತಿಳಿಸಿರುವಾಗ ಇಂಥಾ ಕ್ರಮವನ್ನು ತೆಗೆದುಕೊಳ್ಳಲು ಸರಕಾರ ಅನುಮಾನಿಸಿರುವುದು ತಪ್ಪೆನಿಸುವುದಿಲ್ಲ. ನಿಜ ಇಂಥಾ ಕ್ರಮಗಳ ತಪ್ಪು ಬಳಕೆಯಾಗದಂತೆ ಜಾಗರೂಕತೆ ವಹಿಸುವ ಅಗತ್ಯ ಖಂಡಿತಾ ಇದೆ. ಬಹುಶಃ ಹಲವರು ಸಲಹೆ ಇತ್ತಿರುವಂತೆ, ತಾಯ್ತಂದೆಯರು, ಸಮಾಜ ಕಾರ್ಯಕರ್ತರು, ವೈದ್ಯರ, ಮುಂತಾದವರು ಸೇರಿದಂತೆ ಒಂದು ಸಣ್ಣ ಗುಂಪು ಪ್ರತಿ ಇಂಥಹ ಕೇಸುಗಳನ್ನು ಪರಿಶೀಲಿಸಿ ಅನುಮತಿ ನೀಡಬಹುದು. ಬುದ್ಧಿಮಾಂದ್ಯರ ರಕ್ಷಣೆಗೆ ಹೆಚ್ಚಿನ ಆದ್ಯತೆ ನೀಡಲು ಒತ್ತಾಯಿಸಬೇಕು. ದೈಹಿಕ ರೋಗಗಳು ಕಂಡು ಬಂದಾಗ ಗರ್ಭಾಶಯವನ್ನು ಕಿತ್ತೊಗೆಯಲು ಹಿಂದೆ ಮುಂದೆ ನೋಡಿದಾಗ, ಗುಣಪಡಿಸಲಾರದಂಥ ತೀವ್ರತರದ ಬುದ್ಧಿಮಾಂದ್ಯತೆ ಇರುವಾಗ, ತಮ್ಮ ಅತ್ಯಂತ ವೈಯಕ್ತಿಕ ಅಗತ್ಯಗಳನ್ನು ಸಂಬಾಳಿಸಿಕೊಳ್ಳಲಾರದ, ಮಾನಸಿಕವಾಗಿ ಹಸುಳೆಯ ವಯಸ್ಸಿನಲ್ಲೇ ನಿಂತುಬಿಟ್ಟ ಕೇಸುಗಳಲ್ಲಿ ಗರ್ಭಾಶಯ ತೆಗೆಯುವುದು ಇಷ್ಟು ವಿರೋಧದ ವಿಷಯವಾಗಬೇಕಿಲ್ಲ. ಆಕೆಯ ಹೇವ ಸ್ವಾತಂತ್ರ್ಯವನ್ನು ಕಿತ್ತುಕೊಳ್ಳುತ್ತಿದ್ದೇವೆ ಅನ್ನುವವರು ಮೂರು ವರ್ಷದ ಕೂಸು ಗರ್ಭಿಣಿಯಾಗುವುದನ್ನು ಊಹಿಸಿಕೊಳ್ಳಬೇಕು.

'ಗರ್ಭಾಶಯವನ್ನು ತೆಗೆವ ಬದಲು ಹೆಚ್ಚಿನ ಮುತುವರ್ಜಿಯಿಂದ ನೋಡಿಕೊಳ್ಳುವ ವ್ಯವಸ್ಥೆ ಬರಲಿ' ಎನ್ನುವವರಿದ್ದಾರೆ. ಇಂಥ ಹೆಂಗಸರನ್ನು ಮುಟ್ಟಾದಾಗ ಸಂಬಾಳಿಸುವ ಕಷ್ಟವನ್ನು ಅರ್ಥ ಮಾಡಿಕೊಂಡವರು ಬಹುಶಃ ಹೀಗೆ ಹೇಳಲಾರರು. ಇಂಥ ಹೆಂಗಸರನ್ನು ಸಂಬಾಳಿಸಬೇಕಾದವರೂ ಹೆಂಗಸರೆ. ಒಂದು ಹೆಂಗಸಿನ ಮುಟ್ಟನ್ನು ದಿನದ 24 ಗಂಟೆಗಳ ಕಾಲ ಕಾಯುತ್ತಾ, ಶುಚಿಗೊಳಿಸುವ ಕೆಲಸವನ್ನು ಊಹಿಸಿಯೇ ತಿಳಿಯಬಹುದು.

ತಟ್ಟನೆ ಸುದ್ದಿಯಾಗಿ ಗುಲ್ಲೆಬ್ಬಿಸುತ್ತಿರುವ ಈ ವಿಧಾನ ಇಂದು ಕೈಗೊಂಡ ಹೊಸ ಕ್ರಮವೇನೂ ಅಲ್ಲ. ಓರ್ವ ವೈದ್ಯರು 25 ವರ್ಷಗಳ ಹಿಂದೆಯೇ ತೀವ್ರತರವಾಗಿ ಬುದ್ಧಿಮಾಂದ್ಯತೆ ಇದ್ದ ಹೆಣ್ಣು ಮಕ್ಕಳಿಗೆ ತಮಿಳುನಾಡಿನ ಮಧುರೈನಲ್ಲಿ ಗರ್ಭಾಶಯ ತೆಗೆದ ಪ್ರಸಂಗವನ್ನು ಪತ್ರಿಕೆಯೊಂದಕ್ಕೆ ತಿಳಿಸಿದ್ದಾರೆ. ಎಷ್ಟೋ ಜನ ತಾಯ್ತಂದೆಯರು ಸದ್ದಿಲ್ಲದೆ ಈ ಕ್ರಮವನ್ನು ತೆಗೆದುಕೊಳ್ಳುತ್ತಾರೆ. ವಿಷಯ ಹೊರಗೆ ಹಬ್ಬಿದರೆ 'ಅಷ್ಟೂ ನೋಡಿಕೊಳ್ಳದ ತಾಯಿ' ಎಂದು ಸಲೀಸಾಗಿ ಬೆಟ್ಟು ಮಾಡುವ ಬೆರಳುಗಳು ನಮ್ಮಲ್ಲಿ ಹೇರಳವಾಗಿವೆ.

ಬಹುಶಃ ಈ ವಿಷಯವನ್ನು ಅಂಥ ಮಕ್ಕಳನ್ನು ಹೊಂದಿರುವ ತಾಯ್ತಂದೆಯರ ನಿರ್ಧಾರಕ್ಕೆ, ಅವರಿಲ್ಲದಾಗ ವೈದ್ಯರ ಹಾಗೂ ಮನೋವೈದ್ಯರ ಸಲಹೆಗೆ ಬಿಡುವುದು ಉತ್ತಮ.



# ಕಾನೂನು ಅರಿವು - ಹೇಗೆ ?

★ ಗೌರಿ

ಮಹಿಳೆಯರಿಗೆ ಸಾಮಾನ್ಯವಾಗಿ ಅನ್ವಯಿಸುವ ಕಾನೂನುಗಳ ಬಗ್ಗೆ ಸರಳ ರೀತಿಯಲ್ಲಿ ಅರಿವು ಮೂಡಿಸುವ ಪ್ರಯತ್ನವನ್ನು ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ಮತ್ತು ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇದೀಗ ಮಾಡಿದೆ. 'ಮಹಿಳಾ ಹಕ್ಕುಗಳು' ಎಂಬ ಮಾಲೆಯಲ್ಲಿ 'ನಮ್ಮ ಕಾನೂನುಗಳು' ಎಂಬ ಹತ್ತು ಪುಸ್ತಕಗಳನ್ನು ಅದು ಪ್ರಕಟಿಸಿದೆ. ಇವುಗಳನ್ನು ಅಂತರರಾಷ್ಟ್ರೀಯ ಮಹಿಳಾ ದಿನದಂದು ಬಿಡುಗಡೆ ಮಾಡುವ ಇಚ್ಛೆ ಅದರದು. ಈ ಮಾಲಿಕೆಯಲ್ಲಿ ಕೆಳವರ್ಗದ ಹೆಂಗಸರು, ಮುಖ್ಯವಾಗಿ ನವಸಾಕ್ಷರ ಮಹಿಳೆಯರು ಬಳಸಲು ಸಾಧ್ಯವಾಗಲಿ ಎಂಬ ಉದ್ದೇಶದಿಂದ ನಿರೂಪಣೆಯನ್ನು ಅತ್ಯಂತ ಸರಳವಾಗಿ ಹೇಳಲಾಗಿದೆ. ಅಲ್ಲಲ್ಲಿ ಉಪಮೇಗಳನ್ನು ಬಳಸಲಾಗಿದೆ. ಈ ಹತ್ತು ಪುಸ್ತಕಗಳತ್ತ ಇಣುಕುನೋಟ ಮಾಡುವ ಪ್ರಯತ್ನ ಈ ಲೇಖನದ್ದು.

---

ಮಹಿಳೆ ಮೇಲೆ ಅನೇಕ ರೀತಿಯಲ್ಲಿ ದೌರ್ಜನ್ಯ ನಡೆಯುತ್ತಿರುತ್ತದೆ. ದುಡಿಯುವ ಮಹಿಳೆಯಾಗಿ ಕಚೇರಿ–ಕಾರ್ಖಾನೆಗಳಲ್ಲಿ, ವರದಕ್ಷಿಣೆ ಕಾರಣ ಮದುವೆ ಸಂದರ್ಭದಲ್ಲಿ, ಕಾಮ ಪಿಪಾಸಿಗಳ ಅಮಾನುಷ ವರ್ತನೆಯಿಂದ ಅತ್ಯಾಚಾರಕ್ಕೆ ಒಳಗಾಗಿ....ಒಂದೇ ಎರಡೇ ನಾನಾ ರೀತಿ ಮಹಿಳೆ ಮಾನಸಿಕ, ದೈಹಿಕ ಹಿಂಸೆಗೆ ಒಳಗಾಗುತ್ತಾಳೆ. ಇಂಥ ಅನೇಕ ಅಕೃತ್ಯಗಳ ವಿರುದ್ಧ ತನ್ನ ರಕ್ಷಣೆಗೆ ಹಲವಾರು ಕಾನೂನು ಈ ದೇಶದಲ್ಲಿ ಇದೆ ಎಂಬುದು ಸಹಸ್ರಾರು ಮಂದಿಗೆ ಗೊತ್ತಿಲ್ಲದಿರುವುದು ಕಠೋರ ಸತ್ಯ. ಕಾನೂನು ಪುಸ್ತಕ ಕೇವಲ ಪಂಡಿತರಿಗೆ. ಜನಸಾಮಾನ್ಯರಿಗೆ ಅರ್ಥವಾಗುವುದೆಂತು ಎಂಬ ಪ್ರಶ್ನೆಗಳು ಮೂಡುವುದೂ ಅಷ್ಟೇ ನಿಜ. ಯಾರ ಒಳಿತಿಗಾಗಿ ಕಾನೂನುಗಳನ್ನು ರೂಪಿಸಲಾಗಿದೆಯೋ ಅವುಗಳ ಬಗೆಗೆ ಅವರಿಗೆ ಅರಿವು ಮೂಡಿಸದಿದ್ದರೆ ಅಂಥ ಕಾನೂನುಗಳು ವ್ಯರ್ಥ ಪ್ರಯತ್ನವಾಗುತ್ತದೆ ; ಗ್ರಂಥಗಳಲ್ಲಿ ಅಡಗಿ ಹೋಗುತ್ತವೆ. "ಕಾನೂನಿನಿಂದ ಏನು ಪ್ರಯೋಜನಾ, ನಮ್ಮ ಶೋಷಣೆ ಕಡಿಮೆಯಾದೀತೆ" ಎಂಬ ಪ್ರಶ್ನೆ ಕೂಡ ಮೂಡಿಬರುತ್ತದೆ. ಕಾನೂನು ಒಂದು ಸಮಾಜದ ಸುವ್ಯವಸ್ಥೆ ರೂಪಿಸಿರುವ ಸಾಧನ. ಇದರ ದುರುಪಯೋಗವಾಗಬಹುದು. ಆದರೆ ಕಾನೂನು ಉಲ್ಲಂಘನೆಯಿಂದ ಒಬ್ಬ ವ್ಯಕ್ತಿಯನ್ನು ಶಿಕ್ಷೆಗೆ ಗುರಿಪಡಿಸಲು ಸಾಧ್ಯ. ಕಾನೂನು ಪಾಲಕರು ಪಕ್ಷಪಾತ ತೋರಿದಾಗ ಅವರ ವಿರುದ್ಧ ಹೋರಾಟ ಕೂಡ ಸಾಧ್ಯ ಮಾಡುತ್ತದೆ, ಈ ಕಾನೂನು. ಈ ಹಿನ್ನೆಲೆಯಲ್ಲಿ ಮಹಿಳೆಯರು ವಿವಿಧ ಕ್ಷೇತ್ರದಲ್ಲಿ ತಮ್ಮ ರಕ್ಷಣೆಗಿರುವ ಕಾನೂನುಗಳ ಬಗೆಗೆ ಅರಿತುಕೊಳ್ಳುವುದು ಅತ್ಯಗತ್ಯ. ತಮ್ಮ ಹಕ್ಕುಗಳನ್ನು ಸ್ಥಾಪಿಸಿಕೊಳ್ಳುವುದು ಅಗತ್ಯ.

## ದುಡಿಯುವ ಮಹಿಳೆ

ದುಡಿಯುವ ಮಹಿಳೆಯರಿಗೆ ಸಂಬಂಧಿಸಿದ ಕಾನೂನುಗಳು, ಅವರು ಪಡೆಯಬಹುದಾದ ಪರಿಹಾರಗಳು ವಿವರ ನೀಡುವ ಮೊದಲ ಪುಸ್ತಕವು ಇದರಲ್ಲೇ ಬಾಲ ಕಾರ್ಮಿಕರನ್ನು ಕುರಿತ ಕಾನೂನಿನ ಬಗೆಗೂ ತಿಳಿಸುತ್ತದೆ.

# ಬಡತನ ನಿರ್ಮೂಲನಾ ವಿಶಿಷ್ಟ ಕಾರ್ಯಕ್ರಮಗಳು

ಕಡುಬಡವರ, ದೀನದಲಿತರ ಮಹಾನ್ ಕಣ್ಮಣಿ ದಿ|| ಶ್ರೀಮತಿ ಇಂದಿರಾಗಾಂಧಿಯವರು ಬಡಜನರ ಬಾಳನ್ನು ಉತ್ತಮಗೊಳಿಸಲು ಅವಿರತವಾಗಿ ಶ್ರಮಿಸುತ್ತಾ ತಮ್ಮ ಜೀವವನ್ನೇ ತೇದರು. ಅವರ ಜೀವನ ಚರಿತ್ರೆಯು ಬಡತನದ ವಿರುದ್ಧ ಅವರ ಹೋರಾಟದ ಒಂದು ವೀರಗಾಥೆ. ಅವರ ಜನ್ಮದಿನದಂದು ಅವರ ಆಶೋತ್ತರಗಳನ್ನು ನೆರವೇರಿಸುವುದಕ್ಕಿಂತಲೂ ಹೆಚ್ಚಿನ ಕಾಣಿಕೆ ಬೇರೊಂದಿಲ್ಲ. ಈ ದಿಶೆಯಲ್ಲಿ ಕರ್ನಾಟಕ ಸರ್ಕಾರ "ಬಡತನ ನಿರ್ಮೂಲನಾ ಕಾರ್ಯಕ್ರಮ"ಗಳ ಅಡಿ ವಿವಿಧ ಯೋಜನೆಗಳನ್ನು ಹಮ್ಮಿಕೊಂಡು ಕಾರ್ಯಗತ ಮಾಡುತ್ತಿದೆ.

## ವಿಶೇಷ ಯೋಜನೆಗಳು

★ 6 ಲಕ್ಷ ಯುವಕರಿಗೆ ಉದ್ಯೋಗ

★ ಪ್ರತಿ ಗ್ರಾಮಕ್ಕೂ ಕುಡಿಯುವ ನೀರಿನ ಸೌಲಭ್ಯ

★ ಗ್ರಾಮೀಣ ಹಾಗೂ ನಗರ ಕೊಳಚೆ ಪ್ರದೇಶ ವಾಸಿಗಳಿಗೆ 1,50,000 ಮನೆಗಳ ನಿರ್ಮಾಣ ಹಳ್ಳಿಗೊಂದು ಶಾಲೆ, ತರಗತಿಗೊಬ್ಬ ಶಿಕ್ಷಕ. ಮಾರ್ಚ್ 94ರ ಒಳಗೆ 9980 ಶಿಕ್ಷಕರ ನೇಮಕಾತಿ

★ ರಸ್ತೆಗಳ ನಿರ್ಮಾಣ

★ 20,000 ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದ ವರ್ಗದ ವಿದ್ಯಾರ್ಥಿಗಳಿಗೆ ಹಾಸ್ಟೆಲ್ ಸೌಕರ್ಯ

★ ಒಂದು ಲಕ್ಷ ಮಹಿಳೆಯರಿಗೆ ಸ್ವಾವಲಂಬಿಗಳಾಗಲು ನೆರವು

★ 20 ಕೋಟಿ ಮರಗಳನ್ನು ನೆಟ್ಟು ಕರ್ನಾಟಕದ ಹಸಿರಿನ ಸಿರಿಯನ್ನು ವರ್ಧಿಸುವ ಕಾರ್ಯಕ್ರಮ

★ 1ನೇ ತರಗತಿಯಲ್ಲಿ ಕಲಿಯುವ 12 ಲಕ್ಷ ಮಕ್ಕಳಿಗೆ ಉಚಿತ ಹಾಲು ಪೂರೈಕೆ

★ ಸ್ವಯಂಸೇವಾ ಸಂಸ್ಥೆಗಳಿಗೆ ಜನರಿಂದ ಪ್ರಾಯೋಜಿತ ಕಾರ್ಯಕ್ರಮಗಳಿಗಾಗಿ ಬೀಜಧನ ಸಹಾಯ

★ "ಇಂದಿರಾ ಗ್ರಾಮ ಯೋಜನೆ" ರಾಜ್ಯದಲ್ಲಿ ಪ್ರತಿ ಜಿಲ್ಲೆಗೂ ಒಂದು ಗ್ರಾಮದಂತೆ 20 ಮಾದರಿ ಗ್ರಾಮಗಳ ಅಭಿವೃದ್ಧಿ

**ಇವೆಲ್ಲ ಕಾರ್ಯಕ್ರಮಗಳನ್ನು ಮಾರ್ಚ್ 1994ರ ಒಳಗಾಗಿ ಪೂರ್ಣಗೊಳಿಸಲು ರೂ. 725 ಕೋಟಿ ಬೃಹತ್ ಮೊತ್ತವನ್ನು ಮೀಸಲಾಗಿಡಲಾಗಿದೆ.**

ಎನ್ : 4194. — ಕರ್ನಾಟಕ ವಾರ್ತೆ —

ದುಡಿಯುವ ಮಹಿಳೆ ಸಂಘಟಿತ ವಲಯದಲ್ಲಿ ದುಡಿಯಲಿ, ಕಾಂಟ್ರಾಕ್ಟ್ ದುಡಿಮೆಯಲ್ಲಿರಲಿ, ಕಟ್ಟಡ ನಿರ್ಮಾಣ ಕೆಲಸ ಮಾಡಲಿ, ಅಸಂಘಟಿತ ಕ್ಷೇತ್ರದಲ್ಲಿ ರಲಿ ಎಲ್ಲೇ ದುಡಿಯುತ್ತಿದ್ದರೂ ಕಾನೂನಿನ ಮೂಲಕ ಕೆಲವು ಹಕ್ಕುಗಳನ್ನು ಅವಳು ಹೊಂದಿರುತ್ತಾಳೆ. ವೇತನ, ಕನಿಷ್ಠ ಕೂಲಿ, ಸಮಾನ ಕೂಲಿ, ಗರ್ಭಿಣಿ ಯಾದಾಗಿನ ಸೌಲಭ್ಯ, ಕೆಲಸದ ಅವಧಿ, ಹೆಚ್ಚುವರಿ ಕೆಲಸಕ್ಕೆ ಹೆಚ್ಚು ಕೂಲಿ (ಓವರ್ ಟೈಮ್) ಇವೇ ಮುಂತಾದವುಗಳ ಬಗೆಗೆ ಕಾನೂನುಗಳಿವೆ. ಮಾಲೀ ಕರು ಯಾವುದೇ ಅಸಮಾನತೆ ತೋರಿದರೆ ಕಾರ್ಮಿಕ ಅಧಿಕಾರಿ, ಕಾರ್ಮಿಕ ಕಮಿಷನರ್ ಮತ್ತು ಸಮಾಜ ಕಲ್ಯಾಣ ಸಂಸ್ಥೆಗಳ ಸಹಾಯ ಪಡೆಯಬಹುದು—ಇವೇ ಮುಂತಾದ ವಿವರಗಳು ಈ ಪುಸ್ತಕದಲ್ಲಿದೆ.

### ಕರಾರು ಕಾರ್ಮಿಕರು

ಸ್ಥಳದಿಂದ ಸ್ಥಳಕ್ಕೆ ಕಂಟ್ರಾಕ್ಟರ್ ಮೂಲಕ ತಿರು ಗಾಡುವ ಕರಾರು ಕಾರ್ಮಿಕರಿಗೆ ಕಾಯಂ ಕೆಲಸಗಾರರ ಭದ್ರತೆ ಇರುವುದಿಲ್ಲ. ಅವರಿಗೆ ಅನೇಕ ಸವಲತ್ತು ಗಳೂ ಲಭ್ಯವಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಸರ್ಕಾ ರವು ಗುತ್ತಿಗೆ ಕಾರ್ಮಿಕ (ವಿನಿಮಯ ಮತ್ತು ರದ್ದಿ ಯಾತಿ) ಅಧಿನಿಯಮ, 1970 ಎಂಬ ಕಾನೂನನ್ನು ರೂಪಿಸಿದೆ. ಇದರಂತೆ ಕಂಟ್ರಾಕ್ಟರ್ ಮೂಲಕ ಕಾರ್ಮಿಕರನ್ನು ಕೆಲಸಕ್ಕೆ ತೆಗೆದುಕೊಳ್ಳುವ ಯಾವನೇ ನಿಯೋಜಕನು ತನ್ನ ಹೆಸರನ್ನು ನೋಂದಾಯಿಸಿರ ಬೇಕು. ಒಬ್ಬ ಮಾಲೀಕನಿಗೆ 20 ಅಥವಾ ಹೆಚ್ಚಿನ ಕೆಲಸಗಾರರನ್ನು ಒದಗಿಸುವ ಯಾವನೇ ಕಂಟ್ರಾಕ್ಟರನು ಲೈಸೆನ್ಸ್ ಹೊಂದಿರಬೇಕು. ಗುತ್ತಿಗೆ ಕಾರ್ಮಿಕರಿಗೂ ಅನೇಕ ರೀತಿಯಲ್ಲಿ ರಕ್ಷಣೆಯನ್ನು ಒದಗಿಸುತ್ತದೆ ಈ ಕಾನೂನು.

### ಜೀತ ಕಾರ್ಮಿಕ

ದೇಶದಲ್ಲಿ ಜೀತ ಪದ್ಧತಿ ನಿರ್ಮೂಲನೆಯಾಗಿದೆ ಎಂದು ಸರ್ಕಾರ ಹೇಳಿಕೊಂಡಿದ್ದರೂ ಜೀತ ಕಾರ್ಮಿಕ ವ್ಯವಸ್ಥೆ ರಾಜಾರೋಷವಾಗಿ ನಡೆದಿದೆ. ತಂದೆಯ ಸಾಲಕ್ಕೆ ದಣಿ ಬಳಿ ಜೀತದಾರರಾಗುವ ಬಾಲಕ, ಬಾಲಕಿಯರು ತಾವು ಸಾಯುವವರೆಗೂ ಜೀತದಾಳು ಗಳಾಗೇ ಉಳಿಯುವ ಸಂದರ್ಭಗಳು ಹೆಚ್ಚು. ಇಂಥ ಜೀತ ಕಾರ್ಮಿಕ ನಾಗರೀಕ ಹಕ್ಕುಗಳ ರಕ್ಷಣೆಗೆ ರೂಪಿ ಸಿರುವ ಕಾನೂನಿನಿಂದ ಅವನಿಗೆ ಜೀತದಿಂದ ಮುಕ್ತಿ, ಹೊಸ ಜೀವನದ ಪ್ರಾರಂಭಕ್ಕೆ ನೆರವು ನೀಡುತ್ತದೆ.

### ಹಿಂದು ದತ್ತಕ

ಮಕ್ಕಳಿಲ್ಲದವರು ಮಕ್ಕಳನ್ನು ದತ್ತಕ ಪಡೆಯು ವುದು ಇತ್ತೀಚಿನ ದಿನಗಳಲ್ಲಿ ಸಾಮಾನ್ಯ. ಆದರೆ ಇದು ಕಾನೂನು ಕ್ರಮವಾಗಿ ನಡೆವುದು ಒಳಿತು. ಹೀಗಾಗಿ ಸರ್ಕಾರವು ಹಿಂದು ದತ್ತಕ ಮತ್ತು ಜೀವ ನಾಂಶ ಅಧಿನಿಯಮ 1956 ಅನ್ನು ರೂಪಿಸಿದೆ. ದತ್ತು ಸ್ವೀಕಾರ ಬರೀ ದಂಪತಿಗಳಿಂದ ಆಗಬೇಕಾಗಿಲ್ಲ. ಅವಿವಾಹಿತ ಹಿಂದೂ ಮಹಿಳೆ. ವಿಧವೆ ಕೂಡ ದತ್ತು ಸ್ವೀಕರಿಸಬಹುದು. ಕಾನೂನಿನ ನಿಯಮಾವಳಿಗೆ ಅನು ಸಾರವಾಗಿ ದತ್ತು ಸ್ವೀಕರಿಸುವುದು ಒಳಿತು.

ಅನೇಕ ಕಾರಣಗಳಿಂದ ಒಬ್ಬ ಮಹಿಳೆಗೆ ಗರ್ಭ ಪಾತ ಮಾಡಿಸಿಕೊಳ್ಳುವುದು ಅಗತ್ಯವಾದರೆ ಆಕೆಯನ್ನು ಯಾರೂ ತಡೆಯದಂತೆ ಕಾನೂನು ಅವಳನ್ನು ರಕ್ಷಿಸು ತ್ತದೆ. ವೈದ್ಯಕೀಯ ಗರ್ಭಪಾತ ಎಂದೇ ಇದಕ್ಕೆ ಹೆಸರು. ಗರ್ಭಪಾತವನ್ನು ಸರ್ಕಾರಿ ಆಸ್ಪತ್ರೆ ಅಥವಾ ಸರ್ಕಾರದಿಂದ ಮಾನ್ಯತೆ ಪಡೆದ ಆಸ್ಪತ್ರೆಯಲ್ಲಿ

---

ಕಾನೂನಿನ ಸರಳ ಪರಿಚಯದ ಹತ್ತು ಪುಸ್ತಕಗಳು ಹೆಚ್ಚು ಗ್ರಾಮಾಂತರ ಪ್ರದೇಶ ಜನರನ್ನು ತಲುಪಬೇಕೆಂಬುದು ಪ್ರಕಾಶಕರ ಆಶಯ. ಇವುಗಳಲ್ಲಿನ ಮಾಹಿತಿ ಪಟ್ಟಣ ಪ್ರದೇಶದ ಮಹಿಳೆಯರಿಗೂ ಉಪಯುಕ್ತ. ಇವು ಕಾನೂನಿನ ಸಮಗ್ರ ಪಾಠವೇನಲ್ಲ. ಮಹಿಳೆಯರಿಗೆ ತಮ್ಮ ನಾಗರಿಕ ಹಕ್ಕುಗಳ ಅರಿವಾಗಲಿ, ಅವರು ಆತ್ಮ ವಿಶ್ವಾಸದಿಂದ ಹಾಗೂ ಸಂದಿಗ್ಧ ರಹಿತ ರೀತಿಯಲ್ಲಿ ತಮ್ಮ ಸಮಸ್ಯೆಗಳಿಗೆ ತಾವೇ ಧ್ವನಿ ಕೊಡುವಂತಾಗಲಿ ಎಂದು ಮಾಲಿಕೆ ಬಯಸುತ್ತದೆ ಎಂದು ಹಿನ್ನುಡಿಯಲ್ಲಿ ಹೇಳಲಾಗಿದೆ. ಇದು ಎಲ್ಲರ ಆಶಯ ಕೂಡ.

---

ಮಾಡಿಸಿಕೊಳ್ಳಬೇಕು ; ವೈದ್ಯರಿಂದಲೇ ಮಾಡಿಸಿಕೊಳ್ಳಬೇಕು. ಕೂಡ ಪದ್ಧತಿಗಳು ಪ್ರಾಣಹಾನಿ ಮಾಡುತ್ತವೆ.

### ಹಿಂದೂ, ಮುಸ್ಲಿಂ, ಕ್ರೈಸ್ತ ವಿವಾಹ

ಹಿಂದೂ, ಮುಸ್ಲಿಂ ಮತ್ತು ಕ್ರೈಸ್ತ ವಿವಾಹ ಕಾನೂನು ಮತ್ತು ಆಸ್ತಿಯ ಹಕ್ಕು ಕುರಿತಂತೆ ಇರುವ ಕಾನೂನುಗಳ ಪರಿಚಯವನ್ನು ಮೂರು ಪುಸ್ತಕಗಳಲ್ಲಿ ಆಯಾ ಧರ್ಮದ ಮಹಿಳೆಯರಿಗೆ ಅನ್ವಯವಾಗುವುದನ್ನು ತಿಳಿಸಲಾಗಿದೆ.

ವಿವಾಹ, ದ್ವಿಪತ್ನಿತ್ವ ಅಪರಾಧ, ಬಾಲ್ಯವಿವಾಹ, ವಿಚ್ಛೇದನ, ಜೀವನಾಂಶ, ಆಸ್ತಿ ಹಕ್ಕು ಮೊದಲಾದವು ಈ ಪುಸ್ತಕಗಳಲ್ಲಿ ಚರ್ಚಿತವಾಗಿರುವ ವಿಷಯಗಳು.

### ವರದಕ್ಷಿಣೆ

ವರದಕ್ಷಿಣೆ ಸಾವು, ವರದಕ್ಷಿಣೆ ವಿರುದ್ಧ ಹೋರಾಟ ಇವು ಇಂದಿನ ಮಂತ್ರಗಳಾಗಿಬಿಟ್ಟಿವೆ. ವರದಕ್ಷಿಣೆ ನಿಷೇಧಕಾರಿಕ ಕಾನೂನಿನ ಬಗೆಗೆ ವಿವರ ನೀಡಿರುವ ಈ ಪುಸ್ತಕದಲ್ಲಿನ ವಿಷಯ ಇಂದಿನ ದಿನಕ್ಕಂತೂ ಅಪ್ಯಾಯಮಾನ. ಕಾನೂನು ಅರಿವು ಎಲ್ಲರಿಗೂ ಮೂಡಿದರೆ ಹಿಂಸೆ ಮರೆಯಾದೀತೇನೊ.

### ಅತ್ಯಾಚಾರ

ಹಸುಳೆಯಿಂದ ವೃದ್ಧೆಯವರೆಗೆ ಅತ್ಯಾಚಾರ ನಡೆವ ಪ್ರಸಂಗ ಪ್ರತಿದಿನ ವರದಿಯಾಗುತ್ತಿರುತ್ತದೆ. ಅತ್ಯಾಚಾರಕ್ಕೆ ಒಳಗಾದ ಮಹಿಳೆಯ ರಕ್ಷಣೆ ಇರುವ ಕಾನೂನು ವಿವರ ಇದರಲ್ಲಿದೆ, ಬಳಕೆಯಾಗಬೇಕಷ್ಟೆ. ನಾನಾ ಕಾರಣಗಳಿಂದ ಅತ್ಯಾಚಾರ ಪ್ರಕರಣ ದೂರು ಕಟ್ಟೆಯವರೆಗೆ ಹೋಗುವುದಿಲ್ಲ. ಅತ್ಯಾಚಾರ ವಿರುದ್ಧ ಕಾನೂನು ಬಳಕೆಗೆ ಹಿಂಜರಿಕೆ ಇದೆ. ಜನರಲ್ಲಿ ಅರಿವು ಮೂಡಿಸುವುದು ಅಗತ್ಯ.

### ಪೋಲೀಸರು ಮತ್ತು ನೀವು

ಮಹಿಳೆಯ ಹಕ್ಕುಗಳ ಮಾಲಿಕೆಯ ಕೊನೆಯ ಕಂತು 'ಪೊಲೀಸರು ಮತ್ತು ನೀವು' ನಮ್ಮ ಹಕ್ಕುಗಳ ರಕ್ಷಣೆಗೆ ಪೊಲೀಸರ ಮೊರೆ ಹೋಗಬೇಕು. ದೌರ್ಜನ್ಯ ವಿರುದ್ಧ ದೂರು ನೀಡಲು ಅಲ್ಲಿಗೇ ಹೋಗಬೇಕು. ಈ ಹಿನ್ನೆಲೆಯಲ್ಲಿ ಪೊಲೀಸರ ಬಳಿ ನಾವು ಅನುಸರಿಸಬೇಕಾದ ಕ್ರಮ, ಪೊಲೀಸರು ನಮ್ಮ ಬಳಿ ಅನುಸರಿಸಬೇಕಾದ ರೀತಿ ಬಗೆಗೆ ತಿಳಿಸಲಾಗಿದೆ. ಯಾರು ಯಾರನ್ನು ಯಾವ ಸಂದರ್ಭ, ವೇಳೆಯಲ್ಲಿ ಠಾಣೆಗೆ ಒಯ್ಯಬಹುದು ಎಂಬುದನ್ನು ವಿವರಿಸಲಾಗಿದೆ. ಅತ್ಯಂತ ಉಪಯುಕ್ತ ಮಾಹಿತಿಗಳಿವೆ. ★

# ಸಿರಿಸಂಪಿಗೆ ಒಂದು ಕಾವ್ಯಾತ್ಮಕ ದೃಶ್ಯ ಪ್ರಯೋಗ

★ ಎಸ್. ಸಂಧ್ಯಾ

**ನಗರದ 'ಸ್ಪಂದನ' ಹವ್ಯಾಸಿ ರಂಗ ಕಲಾವಿದರ ಇತ್ತೀಚಿನ ಪ್ರಯೋಗ 'ಸಿರಿ ಸಂಪಿಗೆ'. 'ಸ್ಪಂದನ'ದ ಎಲ್ಲಾ ನಾಟಕಗಳ ನಿರ್ದೇಶನ ಬಿ. ಜಯಶ್ರೀ ಅವರದು. ರಂಗಕಲೆಯನ್ನು ಬಾಲ್ಯದಿಂದಲೂ ರೂಢಿಸಿಕೊಂಡಿರುವ ಜಯಶ್ರೀ ಅವರ ನಿರ್ದೇಶನದ ನಾಟಕಗಳಲ್ಲಿ ಯಶಸ್ವೀ ಭಾಗಗಳು ಹಾಡು ಕುಣಿತಗಳೇ ಆಗಿವೆ. ಹಾಗಾಗಿ ಅವರ ಹೆಚ್ಚಿನ ನಾಟಕಗಳಲ್ಲಿ ಹಾಡು-ಕುಣಿತಗಳ ಹೇರಳ ಬಳಕೆ ಎದ್ದು ತೋರುತ್ತದೆ. ಪುರಾತನ ರಂಗ ಕಲೆಗಳಾದ ಈ ಹಾಡು ಕುಣಿತಗಳನ್ನು ಅಚ್ಚುಕಟ್ಟಾಗಿ ಬಳಸುವ ತಂತ್ರ ಜಯಶ್ರೀ ಅವರಿಗೆ ಸಿದ್ಧಿಸಿರುವುದರಲ್ಲಿ ಅನುಮಾನವಿಲ್ಲ.**

"ಸ್ಪಂದನ"ದ ಇತ್ತೀಚಿನ ನಾಟಕ 'ಸಿರಿಸಂಪಿಗೆ' ಇದೇನೂ ಹಾಡು-ಕುಣಿತ ಪ್ರಧಾನವಾದ ನಾಟಕವಲ್ಲ : ಗದ್ಯ ಭಾಗಗಳಿವೆ, ವಾಸ್ತವವಾದೀ ಅಂಶಗಳಿವೆ. ಆದರೆ, ಎಲ್ಲಕ್ಕಿಂತ ಮೊದಲು ನಾಟಕ ಕೃತಿಯಲ್ಲೇ ಜವಾಬ್ದಾರಿಯುತ ಕಲಾಪ್ರಕಾರದಿಂದ ಬಯಸುವ, ಕೆಲವು ವಿಚಾರಗಳ ನ್ಯೂನತೆ ಹಾಸುಹೊಕ್ಕಾಗಿದೆ. ಉದಾಹರಣೆಗೆ 'ರಾಜ' ಮತ್ತು 'ಪ್ರಜೆ'ಗಳ ನಡುವಿನ ಅನ್ಯೋನತೆ ಕಂಡಾಗ ಈ ನಾಟಕ ಎಷ್ಟು ಹಳೆಯದು, ದೂರವಾದ್ದು, ಫ್ಯೂಡಲ್ ಅದ್ದು ಅನ್ನಿಸುತ್ತೆ. ಮೇಲಾಗಿ ಒಬ್ಬ ವ್ಯಕ್ತಿ ಎರಡಾಗುವುದರಲ್ಲಿ– 'ಮನುಷ್ಯ'; 'ಹಾವು'–ವ್ಯಕ್ತಿ ಬೇರೆ, 'ಹಾವು' ಸೂಚಿಸುವ ಗುಣ (ಇಲ್ಲಿ ಕಾಮುಕತೆ) ಬೇರೆಯಾಗುತ್ತವೆ. ಮುಂದೆ, ಅನ್ಯೋನ್ಯತೆ ಬಯಸುವ ಹೆಣ್ಣಿನ ಪಾಲಿಗೆ ದಕ್ಕುವುದು 'ಹಾವು' ಮಾತ್ರ. ಕೃತಿಯ ಉದ್ದೇಶ ಎಲ್ಲರೂ, ಎಲ್ಲವೂ ಅಪರಿಪೂರ್ಣ ಎಂದು ತೋರಿಸುವುದೆ ಆಗಿದೆ. ಜನಪದ ಮೂಲದಲ್ಲಿ ಮತ್ತೊಂದು ಅರ್ಥಸಾಧ್ಯತೆ ಇರುವುದು ಕಾಣುತ್ತದೆ. ಸೆಕ್ಷುಅಲ್ ಜೆಲಸಿ. ಈ ಎಳೆಯನ್ನೇ ಹಿಡಿದಿಟ್ಟುಕೊಂಡಿದ್ದರೆ ಒಥೆಲೊ, ವಾಯ್‌ಜೆಕ್‌ನಂಥ ಒಂದು ಸಮರ್ಥ ನಾಟಕವನ್ನೇ ಮಾಡಬಹುದಿತ್ತೇನೊ. ಆಗಾದರೂ ನಾಟಕ ಕೃತಿ ಕಾಲದೇಶಗಳಲ್ಲಿ ಸಾರ್ವಕಾಲಿಕವಾಗುತ್ತಿತೇನೊ. "ಸಿರಿಸಂಪಿಗೆ"ಯಲ್ಲಿ ರಾಣಿಯದೇನೂ ಮುಖ್ಯ ಭೂಮಿಕೆಯಲ್ಲ. ರಾಣಿ ಸಿರಿಸಂಪಿಗೆ ಪ್ರಯೋಗದ ಮಟ್ಟಿಗೂ ಹೆಚ್ಚಿನ ಜಾಗ ಆಕ್ರಮಿಸುವುದಿಲ್ಲ. ಆದರೂ ಅದಕ್ಕೆ ಹೆಣ್ಣಿನ ಹೆಸರನ್ನು ಇಟ್ಟಿರುವುದು ಯಾಕೆ ? ನಾಟಕದ ಗ್ಲಾಮರ್ ಹೆಚ್ಚುತ್ತದೆಂಬ ಕಾರಣವಿರಬಹುದೆ ?—ಇಂಥ ಇನ್ನೂ ಕೆಲವು ಮೂಲಭೂತ ಪ್ರಶ್ನೆಗಳು ಈಗೀಗ ಕಾಡತೊಡಗಿವೆ.

ಸಾಕಷ್ಟು ಕತ್ತರಿ ಪ್ರಯೋಗ ಮಾಡಿಯೇ ಜಯಶ್ರೀ ಅವರು ಈ ಕೃತಿಯನ್ನು ಬಳಸಿಕೊಂಡಿದ್ದಾರೆ. ಆದರೆ ಅವರ ಹಿಂದಿನ 'ಅಗ್ನಿಪಥ'ದಲ್ಲಿ ಇಡೀ ನಾಟಕ ಕಾವ್ಯಾತ್ಮಕವಾಗಿ ಕಂಡುಬಂದಂತೆ ಇದರಲ್ಲಿ 'ಒಂದುತ್ವ' ಇದ್ದ ಹಾಗಿಲ್ಲ. ರಂಗದ ಮೇಲೆ ಸ್ಥಿರವಾಗಿ ಜೋಡಿಸಿಟ್ಟ ಬೃಹದಾಕಾರದ ಸೆಟ್ಟು ಅದರಿಂದಾಗಿ ನಟನಟಿಯರ ತೊಡರುವ ಚಲನವಲನ, ಸ್ಪಷ್ಟವಲ್ಲದ ಸಂಭಾಷಣೆ, ಮುಂತಾದ ಕೆಲ ನ್ಯೂನತೆಗಳು ಪ್ರದರ್ಶನದಲ್ಲಿ ಕಂಡುಬಂದವು. ಆದರೆ ರಸಾನುಭವಕ್ಕೆ ಧಕ್ಕೆ ತರುವಂಥ ಅಂಶಗಳನ್ನು ಸಹಾನುಭೂತಿಯಿಂದ ದೂರವಿಡಲು ಸಾಧ್ಯವಾಗಲಾರದು : ಉದಾಹರಣೆಗೆ ಗುಂಪಿನ ದೃಶ್ಯಗಳಲ್ಲಿ–ಎಷ್ಟೇ ಚಿಕ್ಕವಿದ್ದರೂ ತುರ್ತಿನ ವಿಚಾರವಿದ್ದರೂ–ಗುಂಪು ಕೂತುಬಿಡುತ್ತದೆ. ರಾಜನೊ, ರಾಣಿಯೋ ಮಾತಾಡುವವರು ಮಾತ್ರ ನಿಂತು ಮಾತಾಡುತ್ತಿರುತ್ತಾರೆ ! ಮತ್ತೆ, ಕೆಲವು ಭಾವುಕ ಕ್ಷಣಗಳು ಸಿನಿಮೀಯವಾಗಿರುವುದು ನಾಟಕಾಸಕ್ತರ ಗಮನಕ್ಕೆ ತಟ್ಟನೆ ಬಂದುಬಿಡುತ್ತದೆ. ಇಂಥವನ್ನು ಪಕ್ಕಕ್ಕಿಟ್ಟು, ರಾಣಿ ಸಿರಿಸಂಪಿಗೆಯ ವಿಚಾರಕ್ಕೆ ಬರೋಣ. ಮತ್ತೆ 'ಹೆಣ್ಣು ಮಗಳ' ವಿಚಾರಕ್ಕೆ :

## ವಿದ್ಯಾರ್ಥಿಗಳ, ಶಿಕ್ಷಕರ, ವಿಜ್ಞಾನಾಸಕ್ತರ ಸಂಗಾತಿ



# ವಿಜ್ಞಾನ ಸಂಗಾತಿ

(ವಿಜ್ಞಾನ ವಿಷಯಗಳ ಸಚಿತ್ರ ಮಾಸಪತ್ರಿಕೆ)

**ಬಿಡಿ ಪ್ರತಿ : ರೂ. 10     ಪುಟ : 36+4     ವಾರ್ಷಿಕ ಚಂದಾ : ರೂ. 100**

**(ಇದು ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಪ್ರಕಟಣೆ)**

ಖಗೋಳ ಶಾಸ್ತ್ರ, ರಸಾಯನಶಾಸ್ತ್ರ, ಭೌತಶಾಸ್ತ್ರ, ಜೀವಶಾಸ್ತ್ರ, ವೈದ್ಯಕೀಯ, ಆರೋಗ್ಯ ಮತ್ತು ಕೃಷಿ ಮತ್ತು ವಿಜ್ಞಾನ ಇತ್ಯಾದಿ ವಿಜ್ಞಾನದ, ತಂತ್ರಜ್ಞಾನದ ನಾನಾ ಶಾಖೆಗಳ ಇತ್ತೀಚಿನ ಪ್ರಗತಿ ಕುರಿತು ಆಯಾ ಕ್ಷೇತ್ರದಲ್ಲಿ ಪರಿಣತರಾದ ತಜ್ಞರು ಬರೆಯುವ ಸಚಿತ್ರ ಲೇಖನಗಳು ಜತೆಗೆ ವೈಜ್ಞಾನಿಕ ಕಥೆ, ವಿಜ್ಞಾನ ಪದಬಂಧ, ಪ್ರಶ್ನೋತ್ತರಗಳು, ಮತ್ತು ಮಹಿಳೆ, ಯುವಜನರ ಕುರಿತ ಬರಹಗಳು.

**ವಿಜ್ಞಾನವನ್ನು ಜನಪ್ರಿಯಗೊಳಿಸುವ ಉದ್ದೇಶದ ಏಕೈಕ ಪತ್ರಿಕೆ**

ಇಂದೇ ಚಂದಾ ಹಣ ಕಳಿಸಿ. ನಿಮ್ಮ ಪ್ರತಿ ಕಾದಿರಿಸಿಕೊಳ್ಳಿ.

ವಿಜ್ಞಾನ ಸಂಗಾತಿಯ ನಿಯೋಜಿತ ವಿತರಣೆಗಾರರು

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**

ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆಪೆಟ್ಟಿಗೆ 5159, ಬೆಂಗಳೂರು-560 001

ದೂರವಾಣಿ : 2203580/81

**ಶಾಖೆಗಳು : ಕೆಂಪೇಗೌಡ ರಸ್ತೆ ಬೆಂಗಳೂರು-9   ಕೆ. ಎಸ್. ರಾವ್ ರಸ್ತೆ ಮಂಗಳೂರು–1   ರಾಮಸ್ವಾಮಿ ರಸ್ತೆ ಮೈಸೂರು–24   ಸ್ಟೇಷನ್ ರಸ್ತೆ ಗುಲ್ಬರ್ಗ–2**

**(ಚಂದಾ ಹಣ ರೂ. 100/–ನ್ನು ಮನಿಆರ್ಡರ್ ಅಥವಾ ಬ್ಯಾಂಕ್ ಡ್ರಾಫ್ಟ್ ಮೂಲಕ ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್ ಹೆಸರಿಗೆ ಮೇಲಿನ ಯಾವುದೇ ವಿಳಾಸಕ್ಕೆ ಕಳುಹಿಸಬಹುದು)**

ರಾಣಿ ಬಸುರಿಯಾಗಿದ್ದಾಳೆ. ಆ ಬಸಿರು ತನ್ನದಲ್ಲ ಎನ್ನುತ್ತಿದ್ದಾನೆ ರಾಜ. ಜನಪದ ಕತೆಗಳ ಮಹತ್ವ ವಿರುವುದೇ ಇಂಥದರಲ್ಲಿ. ಇದೊಂದು ಘಟನೆಗೆ ಏನೆಲ್ಲ ಅರ್ಥ ಸಾಧ್ಯತೆಗಳಿವೆ ! ರಾಣಿಯ ಮಾನಸಿಕ ತುಮುಲ, ಅವಳಿಗೆ ಆಗುತ್ತಿರುವ ಅವಮಾನ, ಗಂಡಸಿನಲ್ಲಿರುವ ಶಂಕೆಯ ಭೂತ—ಮುಂತಾದವು ಎಲ್ಲ ಕಾಲ-ದೇಶಗಳಿಗೆ ಅನ್ವಯವಾಗುವ ಭಾವಗಳಲ್ಲಿ ಕೆಲವು. ಆದರೆ ಅಂಥಾ ಕತೆಯನ್ನು ಅರ್ಥಪೂರ್ಣವಾಗಿ ಬಳಸಿಕೊಳ್ಳುವ ಕೌಶಲ ತೋರಬೇಕಾಗಿದ್ದುದು ನಾಟಕಕರ್ತ, ರಂಗ ನಿರ್ದೇಶಕಿ. ನಿರ್ದೇಶಕಿಯ ಹೆಚ್ಚಿನ ಗಮನ ಕಾಣುತ್ತಿದ್ದುದು ದೇಶದ ಎಷ್ಟು ಜಾನಪದ ಕಲಾ ಪ್ರಕಾರಗಳಿಂದ ಯಾವ ವೇಷಭೂಷ, ಉಡುಗೆ ತೊಡಿಗೆ, ಪ್ರಾಪರ್ಟಿ, ಕುಣಿತಗಳ ಮಟ್ಟು-ದಾಟಿ ಬಳಸಬೇಕು—ಮುಂತಾದ ವಿಚಾರಗಳ ಕಡೆಗೆ ಸಾರು ವಯ್ಯನ ಯಕ್ಷಗಾನ ಕುಣಿತ, ರಾಣಿ-ಹಾವಿನ ರಾಜಾಸ್ತಾನಿ ಜಾನಪದ ಹಾವಿನ ಕುಣಿತ, ಪೂರ್ವೋತ್ತರ ಭಾರತದ ಮೇಲು ಭಾಗದ ಉಡುಗೆಗೆ ಕೂಡಿಯಟ್ಟಂನ ನಿರಿಗೆಗಳ ಕಚ್ಚೆ, ಹೀಗೆ ಅನೇಕ ವಿಧಗಳ ಮಿಳಿತ-ಮಿಶ್ರಣಗಳ ಪರಿಣಾಮವಾಗಿ ನಾಟಕ ಕಣ್ಣಿಗೆ ಹಬ್ಬವಾಗುವುದೂ ಅಸಾಧ್ಯವಾಯಿತು. ಹಾಡು-ಕುಣಿತಗಳಿದ್ದಾಗ 'ಕತೆ' ಸಾಗುತ್ತಿರಲಿಲ್ಲ. ಆದರೆ ನೋಡಲು ಚೆನ್ನಾಗಿರುತ್ತಿತ್ತು. ಆದೇ, 'ಸಂಭಾಷಣೆ' ಬಂದಾಗ ಮಾತ್ರ ಕತೆ ಮುಂದುವರೆಯುತ್ತಿದ್ದರೂ ಹವ್ಯಾಸಿ ನೋಡುಗರಿಗೆ ನೋಡಲಾಗುತ್ತಿರಲಿಲ್ಲ. ರಾಜ-ಹಾವುಗಳೆಂಬ ಸ್ಕಿಟ್‌ಜೊಫ್ರೇನಿಕ್ (ವ್ಯಕ್ತಿತ್ವ ಭಂಗವಾಗುವುದು) ವಿಚಾರ ಸಂಭಾಷಣೆಯಲ್ಲಿ ಮಾತ್ರ ಬರುತ್ತಿತ್ತು. ಇದು ನಾಟಕೀಯವಾಗಿ ರಂಗದಲ್ಲಿ ಮೂಡಿ ಬರಲೇ ಇಲ್ಲ.

ಆದರೂ 'ಸ್ಪಂದನ'ದ 'ಸಿರಿಸಂಪಿಗೆ' ಮಿಕ್ಕ ಕೆಲ ವಿಚಾರಗಳಲ್ಲಿ ಮೇಲುಗೈ ಪಡೆದಿದೆ : (ಇಂಥದೇ ನಾಟಕ 'ನಾಗಮಂಡಲ'ವನ್ನು ದಿವಂಗತ ಶಂಕರ್‌ನಾಗ್ ಅವರು ಆಡಿಸಿದಾಗ, ಒಂದಾನೊಂದು ಕಾಲದಲ್ಲಿ ಸಿನಿಮಾದಲ್ಲೂ ತೋರಿಸಲು ಹೆದರುತ್ತಿದ್ದ ಬೆಡ್‌ರೂಂ ಸೀನನ್ನು ಅದೆಷ್ಟು ದಿಟ್ಟವಾಗಿ ತೋರಿಸಿದ್ದರು !) ರಾಣಿ ಸಿರಿಸಂಪಿಗೆ ನಾಗಲೋಕಕ್ಕೆ ಪ್ರವೇಶಿಸಿ ಹಾವಿನ ಜೊತೆ ಕೂಡುವುದು ಸಜ್ಜೆಸ್ಟೀವ್ ಆಗಿ ಕಾವ್ಯಾತ್ಮಕ ದೃಶ್ಯವಾಗಿ ಮೂಡುತ್ತದೆ.

ಜಯಶ್ರೀ ದಿಟ್ಟ ಕಲಾವಿದೆ. ಅವರ ಕಲೆ ಸಮಾಜದ ಒಂದು ಗುಂಪಿಗೆ ('ಮಹಿಳೆ'ಗೆ) ಮಾತ್ರ ಸೀಮಿತವಾಗಲಿ ಎಂದು ಬಯಸುವುದು ತಪ್ಪಾಗುತ್ತದೆ. ಆದರೆ ಅವರ ಕಲಾ ಸಾಧನೆ ಎಲ್ಲಿಯಾದರೂ ಒಂದು ಕಡೆ ನಮ್ಮ-ನಿಮ್ಮ ಮನಮುಟ್ಟುವಂತಾದರೆ ಅದಕ್ಕಿಂತಾ ಹೆಚ್ಚಿನ ಕಲಾ ಸಾಧನೆ ಇರಲಾರದು.



# ಸ್ಪಂದನ

## ಹೆರಿಗೆ ರಜೆ ಬೇಡಿಕೆ ಹೇಗೆ ನ್ಯಾಯಯುತ ?

ನೌಕರಿಯಲ್ಲಿರುವ ಮಹಿಳೆಯರಿಗೆ ಮೂರನೇ ಹೆರಿಗೆಗೆ ರಜೆ ನಿರಾಕರಿಸಬೇಕೆಂಬ ಸಲಹೆಯ ವಿರುದ್ಧ ಹಲವಾರು ಮಹಿಳಾ ಸಂಘಟನೆಗಳಿಂದ ತೀವ್ರ ಪ್ರತಿಭಟನೆ ಬಂದಿವೆ. ಸಿ.ಐ.ಟಿ.ಯು. ನೇತೃತ್ವದಲ್ಲಿ ಮಹಿಳೆಯರು ಒಂದು ಪ್ರದರ್ಶನವನ್ನು ಸಹ ಏರ್ಪಡಿಸಿದ್ದರು. ಅದೇ ವಿಷಯವನ್ನು ಕುರಿತು ಸೋದರಿ ನೇಮಿಚಂದ್ರ ಅವರು, ತಮ್ಮದೇ ಆದ ಶುದ್ಧ ಗಂಭೀರ ಶೈಲಿಯಲ್ಲಿ 'ಅಚಲ' ಪತ್ರಿಕೆಯಲ್ಲಿ ಸಹ (ಜನವರಿ 8ರ ಸಂಚಿಕೆ) ಒಂದು ವಿಚಾರ ಪ್ರಚೋದಕ ಲೇಖನವನ್ನು ಬರೆದಿರುತ್ತಾರೆ.

ಸಿ.ಐ.ಟಿ.ಯು. ನೇತೃತ್ವದಲ್ಲಿ ನಡೆಸಿದ ಪ್ರತಿಭಟನಾ ಪ್ರದರ್ಶನ (ವೃತ್ತ ಪತ್ರಿಕಾ ವರದಿಯಂತೆ) ಮಹಿಳೆಯರು ಮೂರನೆಯ ಮಗುವನ್ನು ಹೆರುವ ಅಥವಾ ಬಿಡುವ ನಿರ್ಧಾರ ಅದರ ಇಚ್ಛೆಗೆ ಬಿಟ್ಟಿದ್ದಲ್ಲ; ಗಂಡ, ಅತ್ತೆ, ಮಾವಂದಿರ ಒತ್ತಾಯ, ಸಾಮಾಜಿಕ ಒತ್ತಡದ ಕಾರಣದಿಂದ ಮಹಿಳೆ ಅನಿವಾರ್ಯವಾಗಿ ಮೂರನೆಯ ಮಗು ಹೆರಲು ಸಿದ್ಧವಾಗಬೇಕಾಗುತ್ತದೆ. ಆದ್ದರಿಂದ ಹೆರಿಗೆಗೆ ಸಂಬಂಧಪಟ್ಟ ರಿಯಾಯಿತಿಯನ್ನು ಅವರಿಗೆ ನಿರಾಕರಿಸುವುದು ತಪ್ಪು ಎಂಬ ವಾದ ಮುಂದಿಟ್ಟಿದ್ದರು.

ನೇಮಿಚಂದ್ರ ಅವರು ಈ ಅಂಶಗಳ ಜೊತೆಗೆ ಸಣ್ಣ ಊರುಗಳಲ್ಲಿ ಸೌಲಭ್ಯದ ಅಭಾವವಿರುವಲ್ಲಿ ಹುಟ್ಟಿದ ಮಕ್ಕಳೆಲ್ಲ ಉಳಿಯುವ ಸಾಧ್ಯತೆಯಿರದ ಸಂದರ್ಭದಲ್ಲಿ ಹೆಚ್ಚು ಮಕ್ಕಳನ್ನು ಹೆರುವ ಅಗತ್ಯತೆ ಕಂಡುಬರುತ್ತದೆಂದು ವಾದಿಸಿದ್ದಾರೆ. ಅಲ್ಲದೆ ಇಲ್ಲಿ ಶಿಕ್ಷೆ ಹೆಂಗಸಿಗೆ ಮಾತ್ರ ಸಿಗುತ್ತದೆ ಎಂದಿದ್ದಾರೆ. ಮೂರು ಹೆತ್ತ ಅಪರಾಧದ ಹೊರೆ ಮಹಿಳೆಗೆ ಮಾತ್ರ ಏಕೆ ಎಂದು ಪ್ರಶ್ನಿಸಿದ್ದಾರೆ. ಜನಸಂಖ್ಯೆ ನಿಯಂತ್ರಿಸುವ ಅಗತ್ಯವನ್ನು ಮಹಿಳೆಯರು ನಿರಾಕರಿಸುತ್ತಾರೆಂಬ ಭಾವನೆ ಈ ಪ್ರದರ್ಶನ, ಲೇಖನಗಳಲ್ಲಿ ಕಂಡು ಬರುವುದಿಲ್ಲ.

ಉದ್ಯೋಗಸ್ಥ ಮಹಿಳೆಯರಿಗೆ ಎರಡು ತಿಂಗಳ ರಜೆ ನಿರಾಕರಣೆಯಿಂದ ಭಾರತದ ಜನಸಂಖ್ಯೆ ನಿಯಂತ್ರಿಸಬಹುದೆಂಬ ಭ್ರಮೆ ಯಾರಿಗೂ ಇಲ್ಲ. ಆದರೆ ಯಾವ ಸಂಘಟನೆಗಳೇ ಆಗಲಿ ಸಮಾಜದಲ್ಲಿ ಬೆಳೆದು ಬಂದಿರುವ ದುಷ್ಟ ಸಂಪ್ರದಾಯಗಳ ವಿರುದ್ಧ ಚಳುವಳಿ ನಡೆಸುವುದು ಅವಶ್ಯಕ. ಮೂರನೆಯ ಮಗು ಹೆರಬೇಕೆಂದು ಬಯಸುವ ಕೌಟುಂಬಿಕ, ಸಾಮಾಜಿಕ ಒತ್ತಡಗಳ ವಿರುದ್ಧ ಪ್ರತಿಭಟಿಸಬೇಕಾದ್ದು ಸಹ ಸಂಘಟನೆಗಳ ಪ್ರಥಮ ಕರ್ತವ್ಯವೆಂದು ನನ್ನ ಅನಿಸಿಕೆ. ರಜೆ ನಿರಾಕರಣೆಯನ್ನು ವಿರೋಧಿಸುವುದಕ್ಕಿಂತಲೂ ಆ ಕಾರಣವನ್ನು ಸದುಪಯೋಗಪಡಿಸಿಕೊಂಡು ಈ ಕೌಟುಂಬಿಕ ಒತ್ತಾಯವನ್ನು ವಿರೋಧಿಸುವುದು ಬುದ್ಧಿವಂತಿಕೆಯೆನಿಸುತ್ತದೆ. ಇಲ್ಲದಿದ್ದರೆ ಮಹಿಳೆಯರ ಹಿತ, ಅವರ ಪ್ರಧಾನ ಹಕ್ಕು ರಕ್ಷಿಸಿದಂತಾಗುವುದಿಲ್ಲ.

ಎರಡು ತಿಂಗಳು ರಜಾ ಪ್ರಶ್ನೆ ಕೇವಲ ಉದ್ಯೋಗಸ್ಥ ಮಹಿಳೆಯರಿಗೆ ಮಾತ್ರ ಸಂಬಂಧಿಸಿದ ಸಮಸ್ಯೆಯಾಗಿದೆ. ತಾನು ಇಚ್ಛೆ ಪಡದೆ ಇದ್ದಲ್ಲಿ ಕೌಟುಂಬಿಕ ಒತ್ತಾಯಗಳಿಗೆ ಮಣಿಯದಂತೆ ಮೂಲಭೂತ ಹಕ್ಕುಗಳನ್ನು ರಕ್ಷಿಸುವುದು ಎಲ್ಲ ಮಹಿಳೆಯರಿಗೆ ಸೇರಿದ ಪ್ರಶ್ನೆಯಾಗಿದೆ. ಆದ್ದರಿಂದ ಈ ಹೋರಾಟ ಕೆಲವೇ ಜನರ ಹಿತಕ್ಕಾಗಿ ಇಡೀ ಮಹಿಳಾ ಸಮೂಹದ ಹಕ್ಕುಗಳನ್ನು ಮೊಟಕು ಮಾಡಿದಂತಾಗುತ್ತದೆ. ಉದ್ಯೋಗಸ್ಥ ಸಂಘಟಿತ ಮಹಿಳೆಯರೇ ಕೌಟುಂಬಿಕ ಒತ್ತಡಕ್ಕೆ ಮಣಿಯುವ ಮನೋ ದೌರ್ಬಲ್ಯ ತೋರಿದರೆ ಉಳಿದವರ ಪಾಡೇನು ? ಸಂಘಟಿತ ಮಹಿಳೆಯರು ವಿದ್ಯಾವಂತರಿದ್ದು ಉದ್ಯೋಗಸ್ಥರಾಗಿರುವುದರಿಂದ ತಮ್ಮ ಅನುಕೂಲಕ್ಕಾಗಿ ಮಹಿಳಾ ಸಮೂಹದ ಹಿತ ಬಲಿಗೊಟ್ಟರು ಎಂಬ ಅಪವಾದ ಸಂಘಟನೆಗೆ ಅಂಟಿದರೆ ಆಶ್ಚರ್ಯವಿಲ್ಲ.

–ಸಿ. ವಿ. ಆನಂದ

ಸಮಗ್ರ ಸಾಮಾಜಿಕ ಬದಲಾವಣೆಯಿಲ್ಲದೆ ಹೆಣ್ಣಿನ ಸಮಸ್ಯೆಗಳು, ಅವಳನ್ನು ಕುರಿತ ದೃಷ್ಟಿಕೋನ ಬದಲಾಗುವುದು ಕಷ್ಟ ಸಾಧ್ಯ ಎಂಬ ಆಶಯ ಹೊತ್ತ ಶ್ರೀ ಸಿ. ವಿ. ಆನಂದರವರ ವಿಚಾರಗಳ ಬಗ್ಗೆ 'ಅಚಲ' ಬಳಗಕ್ಕೆ ಭಿನ್ನಾಭಿಪ್ರಾಯವಿಲ್ಲ. ಆದರೆ ಆ ಸಮಗ್ರ ಬದಲಾವಣೆಯಾಗುವವರೆಗೂ ದಿನನಿತ್ಯ ನಡೆಯುತ್ತಿರುವ ಸಾಮಾಜಿಕ ಅನ್ಯಾಯಗಳ ವಿರುದ್ಧ ಮಹಿಳಾ ಸಂಘಟನೆಗಳು ಯಾವ ರೀತಿ ವರ್ತಿಸಬೇಕು ಎನ್ನುವುದು ಸಂಘಟನೆಗಳ ನಿಲುವು ಹಾಗೂ ಧ್ಯೇಯೋದ್ದೇಶಗಳಿಗೆ ಸವಾಲಾಗಿವೆ.

ಮಹಿಳಾ ಸಂಘಟನೆಗಳಿಗೆ ತಟ್ಟಬಹುದಾದ 'ಅಪವಾದ'ಗಳ ಬಗ್ಗೆ ಆನಂದರವರು ಎಷ್ಟೇ ಗಾಬರಿಪಟ್ಟರೂ ಮಹಿಳಾ ಸಂಘಟನೆಗಳು ತಮ್ಮ ತತ್‌ಕ್ಷಣದ ಜವಾಬ್ದಾರಿಯನ್ನು ಕೊಡವಿಕೊಳ್ಳುವುದು ಸಾಧುವಲ್ಲ. ಎರಡು ತಿಂಗಳ ರಜೆ ಪ್ರಶ್ನೆ ಕೇವಲ ಉದ್ಯೋಗಸ್ಥ ಮಹಿಳೆಯ ಸಮಸ್ಯೆಯಾಗಿ ತೋರಿದರೂ, ಇಡೀ ಮಹಿಳಾ ಸಮುದಾಯದ ಹೆರುವ ಕ್ರಿಯೆಯನ್ನು ಕುರಿತಂತೆ ಸಮಾಜ ತಳೆಯುವ ವಿಪರೀತದ ಧೋರಣೆಯನ್ನೂ ತೋರಿಸುತ್ತದೆ. ಮಹಿಳೆಯನ್ನು ಕುರಿತು ಸರ್ಕಾರ, ಸಮಾಜ ತಳೆಯುವ ಭಯಂಕರ ಧೋರಣೆಗಳು, ಸರ್ಕಾರಿ ನೀತಿ ನಿಯಮಾವಳಿಗಳು ಅವಳನ್ನು ಮಾನವಳನ್ನಾಗಿ ನೋಡುವುದಕ್ಕಿಂತ ಹೆರುವ ಯಂತ್ರವಾಗಿ ಪರಿಭಾವಿಸುವ ಸಂದರ್ಭಗಳೇ ಹೆಚ್ಚು. ಇಂತಹ ಸಂದರ್ಭದಲ್ಲೇ ಹೆರಿಗೆ ರಜೆ 'ಸೌಲಭ್ಯ' ಎಂದೆನಿಸಿಕೊಳ್ಳದೆ 'ಸವಲತ್ತು' ಎಂದೆನಿಸಿಕೊಳ್ಳುತ್ತದೆ. ಸಂಘಟಿತ, ಉದ್ಯೋಗಸ್ಥ ಮಹಿಳೆಯರ ಸಂಖ್ಯೆ ಕಡಿಮೆಯೆಂದೆನಿಸಬಹುದಾದರೂ ಈ ಮಹಿಳೆಯರ ಪ್ರತಿಭಟನೆ ಸರ್ಕಾರಿ ನೀತಿಯ ವಿರುದ್ಧದ ಸಾಂಕೇತಿಕ ಪ್ರತಿಭಟನೆಯೆಂದು ಭಾವಿಸಬೇಕು.

—ಅಚಲ

**ತನ್ನ ಬದುಕಿನ ನಿರ್ಧಾರಗಳನ್ನು ತೆಗೆದುಕೊಳ್ಳುವಷ್ಟು ಸ್ವತಂತ್ರ ಮನೋಭಾವವನ್ನು ಹೆಣ್ಣು ಬೆಳೆಸಿಕೊಳ್ಳಬೇಕಾದದ್ದು ಮುಖ್ಯ ಎಂದು ಆನಂದರಂತೆ, ಎಲ್ಲ ಮಹಿಳಾ ಸಂಘಟನೆಗಳು ನಂಬುವುದರಿಂದ ಮೂರನೆಯ ಹೆರಿಗೆ ರಜೆಗೆ ನಡೆಸುವ ಹೋರಾಟ ಈ ದಿಸೆಯತ್ತ ಪೂರಕ ಹೋರಾಟನೇ ಹೊರತು ದಾರಿ ತಪ್ಪಿಸುವ ಚಳುವಳಿಯಲ್ಲ.**

## ಕುಟುಂಬ ಯೋಜನಾ ಸರಿ !

ಚೀನಾ ಜಗತ್ತಿನಲ್ಲೇ ಅತಿ ಹೆಚ್ಚು ಜನಸಂಖ್ಯೆಯ ರಾಷ್ಟ್ರ. ಆದರೆ ಅದು ಹೆಚ್ಚು ದಿನ ಬಹು ಸಂಖ್ಯೆಯ ದೇಶವಾಗುಳಿಯಲಾರದು. ಅವರ ಕುಟುಂಬ ಯೋಜನಾ ಸರಿ, ಹುಟ್ಟುವ ಕೂಸುಗಳ ಕುತ್ತಿಗೆ ಹಿಸುಕುವಂತಿದೆ. ಇಲ್ಲಿ ದಂಪತಿಗಳಿಗೆ ಹುಟ್ಟುವ ಮಕ್ಕಳ ನಿಯಂತ್ರಣ ಸರಕಾರಿ ಅಧಿಕಾರಿಗಳ ಕೈಯಲ್ಲಿದೆ. ಹೆಣ್ಣೊಬ್ಬಳು ಚೀನಾದಲ್ಲಿ ಸರಾಸರಿ 1.8 ರಿಂದ 1.9 ಮಕ್ಕಳನ್ನು ಹೆರಬಲ್ಲಳು. ಇಲ್ಲಿ ಶೇಕಡಾ 83.4ರಷ್ಟು ದಂಪತಿಗಳು ಗರ್ಭಧಾರಣೆ ಆಗದಂತೆ ಕುಟುಂಬ ಯೋಜನಾ ವಿಧಾನಗಳನ್ನು ಅನುಸರಿಸುತ್ತಿದ್ದಾರೆ. ಕಳೆದ ಐದು ವರ್ಷಗಳಲ್ಲಿ ಚೀನಾದಲ್ಲಿ ಹುಟ್ಟುವ ಮಕ್ಕಳ ಸಂಖ್ಯೆ ಸಾವಿರಕ್ಕೆ 23.3 ಇದ್ದದ್ದು, 18.2ಕ್ಕೆ ಇಳಿದಿದೆ. ಹಾಗೆಂದು, ಚೀನಾದ ಜನತೆಗೆ ಒಮ್ಮೆಗೇ ಜ್ಞಾನೋದಯವಾಗಿ, ಜನಜಾಗೃತಿ ಮೂಡಿದೆ ಎಂಬ ಭ್ರಮೆ ಬೇಡ. ಜನಸಂಖ್ಯಾ ನಿಯಂತ್ರಣದಲ್ಲಿ ಸ್ಥಳೀಯ ಸರಕಾರಿ ಅಧಿಕಾರಿಗಳ ಒತ್ತಡ ಎಷ್ಟಿದೆ ಎಂಬುದನ್ನು ಸ್ಪಷ್ಟವಾಗಿ ಹೇಳಲು ಸಾಧ್ಯವಿಲ್ಲ. ಆದರೆ, ಕೇಂದ್ರ ಸರಕಾರ, ಹೆಚ್ಚು ಹುಟ್ಟುವ ಸ್ಥಳಗಳ ಅಧಿಕಾರಿಗಳನ್ನು ಶಿಕ್ಷೆಗೆ ಗುರಿಪಡಿಸುವುದೆಂದು ತಿಳಿದು ಬಂದಿದೆ. ಈ ಕಾರಣದಿಂದ ಬಸಿರ ತಡೆವ ಯತ್ನಗಳು ನಡೆಯುತ್ತಿವೆ. ಕಳೆದ ವರ್ಷದ ಒಂದು ನೋವಿನ ಕತೆ ಕೇಳಿ, ಸರಕಾರಿ ವರದಿಗಳೂ ಈ ಸುದ್ದಿಯನ್ನು ದೃಢಪಡಿಸಿವೆ. ಚೀನಾದ ಓರ್ವ ಎಳೆಯ ಹೆಣ್ಣು ಮಗಳು ಸರಕಾರದ ಜನಸಂಖ್ಯಾ ಅಂಕಿ ಸಂಖ್ಯೆಗಳ ಗುದ್ದಾಟದಲ್ಲಿ ತನ್ನ ಮಗುವನ್ನು ಕಳೆದುಕೊಂಡಳು. 23 ವರ್ಷದ ಲಿ ಕ್ವಿಲಿಯಾಂಗ್ ಏಳು ತಿಂಗಳ ಗರ್ಭಿಣಿ. ಫೆಬ್ರುವರಿ 93ರಂದು ಆಕೆಗೆ ದಿನ ತುಂಬಲಿತ್ತು. ಆದರೆ ಅದು 93ರಲ್ಲಿ ಹುಟ್ಟುವುದರಿಂದ ನಿಗದಿತ ಸರಕಾರಿ ಸಂಖ್ಯೆ ಏರುಪೇರಾಗಲಿತ್ತು. ಡಿಸೆಂಬರ್ 30ರಂದು 7 ತಿಂಗಳ ಲೀ ಯನ್ನು ಒತ್ತಾಯದಿಂದ ಆಸ್ಪತ್ರೆಗೆ ಎಳೆದೊಯ್ದು, ಕೃತಕವಾಗಿ ನೋವು ಬರಿಸಿ 1992ರ ಕಡೇ ದಿನದಂದು ಹುಟ್ಟಿಸಿದ್ದೂ ಆಯ್ತು. ಆದರೆ ಮಗು ಹೊಸ ವರ್ಷವನ್ನು ನೋಡಲು ಬದುಕಲಿಲ್ಲ. ಸರಕಾರ ಮಾತ್ರ ಬಹಳ ಖುಷಿಯಿಂದಿದೆ, 2010ರ ಇಸವಿಗೆ ನಿರೀಕ್ಷಿಸಿದ್ದ ಜನಸಂಖ್ಯಾ ನಿಯಂತ್ರಣದ ಗುರಿಯನ್ನು ಅದು ಮುಟ್ಟಿದೆ, ಇನ್ನೇನು ಬೇಕು ?

*Statement about Ownership and other particulars about Newspaper ACHALA*

FORM IV (See Rule 8)

1 Place of Publication : Bangalore, Karnataka State

2 Periodicity of its Publication : Bi-Monthly

3 Printers Name : Dr. G. Ramkrishna
Janashakthi Printers
Bangalore-9

Nationality : Indian

Address : 26, 1st Main, 11th Cross, Vyalikaval, Bangalore-3

4 Publisher's Name : Dr.G.Ramakrishna for Jagruthi Mahila Adhyayana Kendra Bangalore

Nationality : Indian

Address : 26, 1st Main, 11th Cross, Vyalikaval, Bangalore-3

5 Editor's Name : N. Gayathri

Nationality : Indian

Address : 26, 1st Main, 11th Cross, Vyalikaval, Bangalore-3

6 Name & Address of individuals who own the Newspaper : Dr. G. Ramakrishna
26, 1st Main, 11th Cr.
Vyalikaval
Bangalore – 560 003

I, Dr. G. Ramakrishna, here by declare that the particulars given above are true to the best of my knowledge & belief.

Bangalore Sd/-
Date : 1-3-1994 Dr. G. Ramakrishna

# ನನ್ನವ್ವ ಬಾರೆ

ಅವ್ವಾ
ನಿನ್ನ ಕಣ್ಣುಗಳು ಪಾಳು ಬಿದ್ದ ಬಾವಿ
ಎಲುಬು-ಮೂಳೆ, ಮಾಂಸ ಸುಕ್ಕು
ಗದ್ದೆ ಬಯಲ ಒಣ ಕಂದರ
ಮೇಕೆ ಮೌನ ಒಂಟಿತನ ಬಾಳ ಸಂಗಾತಿಗಳೆ?

ಅವ್ವಾ
ಅಪ್ಪ ಅಪ್ಸರೆಯರ ಕೊಳದೊಳಗೆ ಮುಳುಗಿ
ತೇಲಿ
ಕಸದ ಬುಟ್ಟಿಗೆ ಒಗೆದು
ಮನೆಯತ್ತಾ ತಿರುಗಿ ನೋಡದ ಅರ್ಥ
ನೀನೊಬ್ಬಳು ಹರಿಜನ, ದೇವರಿಗೆ ಬಿಟ್ಟ ಪಟ್ಟ

ಅವ್ವಾ
ದಿಕ್ಕು-ದಿವಾಳಿ ಅನಾಥ ನಾವು
ಬದುಕು, ಸಮಾಜ, ಕ್ರೂರ ವ್ಯವಸ್ಥೆ ಸೆಣಸಾಟ
ಬೆಣ್ಣೆ ತಟ್ಟೆ, ಶ್ರೀಮಂತರ ಕಸ ಮುಸುರೆ ತಿಕ್ಕಿ
ಮೂರು ಕಾಸಲಿ ಹೊಟ್ಟೆ ಹಸಿವೊಡಿನೆ
ವಿಲವಿಲನೆ ಒದ್ದಾಟ ಗಾಳಿ-ನೀರು ಭೋಜನ

ಅವ್ವಾ
ಗಂಡ ಮೂಡಣ ನೆಮ್ಮದಿ ಪಡುವಣ
ಬಾಳ ಭೋರ್ಗರೆವ ಕಡಲಲೆಗಳ ಮರೆ
ನಿನ್ನೊಡಲ ಕೂಸು, ಪುರುಷಧೀರನ
ಚಿಂತೆಯಿಲ್ಲ, ಮೊಮ್ಮಗಳು ನಮ್ಮೊಂದಿಗೆ
ನಿನ್ನ ಕಡೆ ಬದುಕ ಪಯಣ ಸಾಗಲಿ

—ಕಗ್ಗೆರೆ ಪ್ರಕಾಶ್

# ವಿಶಿಷ್ಟ ಅನುಭವದ ಕಥಾಶಿಬಿರ

ಗಜಿಬಿಜಿಗುಟ್ಟುವ ಬಿಡುವಿಲ್ಲದ ನಗರ ಜೀವನದಿಂದ ಸಾಕಷ್ಟು ದೂರದಲ್ಲಿನ ಸುಂದರ ಪ್ರಕೃತಿಧಾಮ. ಸುತ್ತಲೂ ಸುಂದರ ಹಸಿರಿನ ತೆಂಗಿನ ತೋಟ. ಮಧ್ಯದಲ್ಲೊಂದು ಸುವ್ಯವಸ್ಥಿತ ಸೌಕರ್ಯಗಳುಳ್ಳ ಭವ್ಯ ಕಟ್ಟಡ. ಬೆಂಗಳೂರಿಗೆ 37 ಕಿ.ಮೀ. ದೂರವಿರುವ ಟಿ. ಬೇಗೂರಿನ ಬಳಿ ವಿದ್ಯಾವರ್ಧಕ ಶಿಕ್ಷಣ ಟ್ರಸ್ಟ್‌ನವರಿಂದ ನಿರ್ಮಿತವಾದ ಈ ಪ್ರಕೃತಿಧಾಮದಲ್ಲಿ ಕರ್ನಾಟಕ ಲೇಖಕಿಯರ ಸಂಘವು ವಿದ್ಯಾವರ್ಧಕ ಸಂಘದ ಮಹಿಳಾ ಕಾಲೇಜಿನ ಜೊತೆಗೂಡಿ ಎರಡು ದಿನಗಳ ಕಥಾ ಶಿಬಿರವನ್ನು ಏರ್ಪಡಿಸಿತ್ತು. ಶಿಬಿರದಲ್ಲಿ 25 ಮಂದಿ ಲೇಖಕಿಯರು, ಕತೆಗಾರ್ತಿಯರು, ವಿಮರ್ಶಕಿಯರೂ ಈ ಕಥಾ ಶಿಬಿರದಲ್ಲಿ ಭಾಗವಹಿಸಿದ್ದರು.

ಈ ಕಥಾ ಶಿಬಿರವನ್ನು ಎರಡು ಭಾಗಗಳಾಗಿ ನಡೆಸಲಾಯಿತು. ಮೊದಲ ಭಾಗದಲ್ಲಿ ಕನ್ನಡದ ಪ್ರಸಿದ್ಧ ಲೇಖಕ-ಲೇಖಕಿಯರ ಕಥೆಗಳ ಸ್ವರೂಪ, ಲಕ್ಷಣಗಳನ್ನು ಸ್ತ್ರೀವಾದಿ ದೃಷ್ಟಿಕೋನದೊಂದಿಗೆ ವಿಶ್ಲೇಷಿಸಲಾಯಿತು. ಎರಡನೆಯ ವಿಭಾಗದಲ್ಲಿ ಶಿಬಿರಕ್ಕೆ ಆಗಮಿಸಿದ್ದ ಶಿಬಿರಾರ್ಥಿಗಳು ಅವರ ಕತೆಗಳನ್ನು ಓದಿ, ವಿಮರ್ಶಕರ ವಿಶ್ಲೇಷಣೆಗೆ ಅನುವು ಮಾಡಿಕೊಟ್ಟರು.

ಮೊದಲಿಗೆ ಕಥಾಶಿಬಿರದ ಪ್ರಾಸ್ತಾವಿಕ ಭಾಷಣ ಮಾಡಿದ ಡಾ॥ ಬಿ. ಎನ್. ಸುಮಿತ್ರಾ ಬಾಯಿಯವರು ಕಥಾಶಿಬಿರಲ್ಲಿ ಕಥೆಗಳನ್ನು ಆಯ್ಕೆ ಮಾಡಿಕೊಳ್ಳಲು ಅನುಸರಿಸಿದ ನಿಯಮಾವಳಿಗಳನ್ನು ಕುರಿತು ವಿವರಿಸಿದರು. ಇಲ್ಲಿ ಅಧ್ಯಯನಕ್ಕಾಗಿ ಮಾಸ್ತಿಯವರ 'ಗೌತಮಿ ಹೇಳಿದ ಕಥೆ', ಎಚ್. ವಿ. ಸಾವಿತ್ರಮನವರ 'ಪಾತು ಕಥೆ', ಯಶವಂತ ಚಿತ್ತಾಲರ 'ಇವಳಾವ ಜನಕರಾಯನ ಮಗಳು', ವೀಣಾ ಶಾಂತೇಶ್ವರರವರ 'ತಿರುಗಿ ಹೋದಳು', ಬೆಸಗರಹಳ್ಳಿ ರಾಮಣ್ಣನವರ 'ಬೇಲ', ವೈದೇಹಿಯರ 'ಸಮಾಜ ಶಾಸ್ತ್ರಜ್ಞೆಯ ಟಿಪ್ಪಣಿಗೆ', ಬೋಳುವಾರು ಮಹಮದ್ ಕುಂಞಯವರ 'ಮಾರಾಟ', ಸಾರಾ ಅಬೂಬಕರ್‌ರವರ 'ವಿಷವುಣಿಸುವವರು' ನೇಮಿಚಂದ್ರರವರ 'ಕಪ್ಪು ಮೋಡ ಬೆಳ್ಳಿ ಅಂಚು' ಕಥೆಗಳನ್ನು ಆಯ್ದುಕೊಳ್ಳಲಾಗಿತ್ತು.

ಈ ಆಯ್ಕೆಯನ್ನು ಆಯಾ ಬರಹಗಾರರ ಶ್ರೇಷ್ಠ ಪ್ರಾತಿನಿಧಿಕ ಕಥೆ ಎಂಬ ಮಾನದಂಡದಿಂದ ನೋಡಿಲ್ಲ. ಹಾಗೆಯೇ ಶ್ರೇಷ್ಠ/ಕನಿಷ್ಠ, ಶಿಷ್ಟ/ಜನಪ್ರಿಯ, ತರ–ತಮಗಳ ವಿಭಜನಾತ್ಮಕ ಚಿಂತನೆಯನ್ನು ಕೈಬಿಟ್ಟು ಬದಲಾಗಿ ಕಾಲಗತಿಗೆ ತಕ್ಕಂತೆ ನಮ್ಮ ಸಾಂಸ್ಕೃತಿಕ ಪರಿಸರದ ಬದಲಾವಣೆಗಳ ಜೊತೆಗೆ ಸ್ತ್ರೀಯರನ್ನು ಕುರಿತ ಮೌಲ್ಯಗಳಿಗೆ ಒಂದೇ ಸಾಂಸ್ಕೃತಿಕ ಪರಿಸರದಿಂದ ಬಂದ ಸ್ತ್ರೀ ಮತ್ತು ಪುರುಷ ಬರಹಗಾರರು ಹೇಗೆ ಸ್ಪಂದಿಸಿದ್ದಾರೆ? ಸ್ತ್ರೀ ಸಂಬಂಧಿತ ಮೌಲ್ಯಗಳು–ಮದುವೆ, ತಾಯ್ತನ, ಗೃಹಿಣೀತನ, ಕುಟುಂಬದ ನೆಲೆ, ಮುಂತಾದ ಸಾಮಾಜಿಕ ಸ್ವರೂಪಗಳಲ್ಲಿ ರೂಢಿಗತವಾಗಿರುವಂಥದನ್ನು–ಈ ಬರಹಗಾರರು ಸಣ್ಣ ಕತೆಯ ಮಾಧ್ಯಮದಲ್ಲಿ ಹೇಗೆ ಪರೀಕ್ಷಿಸಿ ಒರೆ ಹಚ್ಚಲು ಪ್ರಯತ್ನಿಸಿದ್ದಾರೆ ಎಂಬುದನ್ನು ಚರ್ಚಿಸಲು ಈ ಕಥೆಗಳು ನೆರವಾಗಬೇಕು, ನೆರವಾಗುತ್ತವೆ ಎಂಬ ಆಶಯ ಈ ಆಯ್ಕೆಗೆ ಮುಖ್ಯ ಕಾರಣವೆನ್ನಬಹುದು, ಎಂದು ಸುಮಿತ್ರಾಬಾಯಿಯವರು ವಿವರಿಸಿದರು.

ಕರ್ನಾಟಕದಲ್ಲಿ ಸ್ತ್ರೀವಾದಿ ಚಿಂತನೆಯು ಆಧುನಿಕ, ಹೆಚ್ಚು ಪ್ರಬುದ್ಧವಾದ ಒಂದು ಸೈದ್ಧಾಂತಿಕ ಹೋರಾಟವಾಗಿರುವುದು ಕಳೆದ ಎರಡು ದಶಕಗಳ ಈಚಿನ ಬೆಳವಣಿಗೆ. ಈ ಚಿಂತನೆಯ ನೆಲೆಯಿಂದ ನಮ್ಮ ಹಿಂದಿನ ಸಾಹಿತ್ಯ ಪರಂಪರೆಯನ್ನೂ, ನಮ್ಮ ಇಂದಿನ ಬರವಣಿಗೆಯ ಸ್ವರೂಪವನ್ನೂ ಗುರುತಿಸಿಕೊಳ್ಳುವುದು ಯುಕ್ತವಾದದು. ಸಾಹಿತ್ಯಕ್ಕೂ, ವಿಮರ್ಶೆಗೂ ಸ್ತ್ರೀವಾದಕ್ಕೂ ಏನು ಸಂಬಂಧ? ಇಂದು ಕತೆ ಬರೆಯಲು ಯತ್ನಿಸುತ್ತಿರುವ ಲೇಖಕಿಯರ ಕಮ್ಮಟಕ್ಕೆ ಸ್ತ್ರೀವಾದ ಚರ್ಚೆಯು ಕೇಂದ್ರ ಏಕೆ ಆಗಬೇಕು? ಎಂಬುದನ್ನು ಅರ್ಥೈಸಿದರು.

ಸ್ತ್ರೀವಾದಿ ಚಿಂತನೆಯಲ್ಲಿ ಇಂದು ಹಲವರು ಸ್ತ್ರೀಯರದೇ ಆದ ಪ್ರತಿ ಸಂಸ್ಕೃತಿಯ ಅಂಶಗಳನ್ನು ಗುರುತಿಸಿ, ಎತ್ತಿ ಹಿಡಿದು, ಅರಗಿಸಿಕೊಳ್ಳುತ್ತ ಸಶಕ್ತ ಸಾಹಿತ್ಯ ಸೃಷ್ಟಿಗೆ ಯತ್ನಿಸಬೇಕಾಗಿದೆಯೆಂಬುದರತ್ತ ನಮ್ಮ ಗಮನ ಸೆಳೆಯುತೊಡಗಿದ್ದಾರೆ. ಅವರಲ್ಲಿ ಜಾನಪದ ಮೂಲದಿಂದ ಸ್ತ್ರೀಯರು ತಮ್ಮ ಗಟ್ಟಿತನವನ್ನು ಕಂಡುಕೊಳ್ಳಬೇಕೆಂದು ಜಾನಪದ ವಿದ್ವಾಂಸರು

ಹೇಳಿದರೆ, ವೈದಿಕ ಉಪನಿಷತ್ತಿನ ನೆಲೆಯಿಂದ ಗೃಹವಾದಿನಿ–ಬ್ರಹ್ಮವಾದಿನಿಯರ ಪರಂಪರೆಯ ಸತ್ವ ಹುಡುಕಲು ಕೆಲವು ಬುದ್ಧಿಜೀವಿಗಳು ಅಪ್ಪಣೆ ಮಾಡುತ್ತಿದ್ದಾರೆ–ಈ ಎಲ್ಲ ಸೂಚನೆಗಳು ಅಕ್ಷರ ಸಂಸ್ಕೃತಿಯ ವಲಯದಿಂದ ಹಿಂದೆ ಹೋಗಿ ಸ್ತ್ರೀಯರು, ಅಲಿಖಿತ ಸಂಸ್ಕೃತಿ, ಕಂಠಸ್ಥ ಸಾಹಿತ್ಯ, ಮೌನವಾಗುಳಿದ ಅನುಭವದ ಸತ್ವಗಳು ಮತ್ತು ಸುಪ್ತ ಪ್ರಜ್ಞೆಯಲ್ಲಿ ಮಾತ್ರ ಕೆಲಸ ಮಾಡುವ ಪುರಾಣಗಳಿಂದ ತಮ್ಮ ಶಕ್ತಿ ಕಂಡುಕೊಳ್ಳಬೇಕು ಎಂದು ಸಾರುತ್ತಿವೆ. ಇದೆಲ್ಲದರ ಅರ್ಥ–ಭಾಷಿಕವಾದ, ಕಲಿತ ಪ್ರಜ್ಞೆಯ ನೆಲೆಗೆ ಸ್ತ್ರೀ ಸಲ್ಲಿಸಬಹುದಾದ್ದು ಕೇವಲ ಅಶೋಧಿಕವಾದ ಈ ಕಗ್ಗತ್ತಲ ಲೋಕದಿಂದ ಬರುವ ಅನುಭವಗಳು ಮಾತ್ರವೇ? ಎಂದು ಆಗುವುದು. ಇಂದಿನ ವಾಸ್ತವದಲ್ಲಿದ್ದೂ ಈ ಗುಹೆಯ ಲೋಕದೊಳಗೆ ಹೋಗಿ, ಹೊರಬಂದ ನಂತರ ಇಂದಿಗೆ ಮತ್ತೆ ಸಲ್ಲುವಂಥಾದ್ದನ್ನು ನೀಡಲು ಸಾಧ್ಯವೇ? ಅಥವಾ ಅದು ಪುರಾಣ ಸಂಕೇತಗಳಲ್ಲಿ ಮುಳುಗಿಸುವಂತದ್ದೇ–ಎಂಬುದು ಬಹುಮುಖ್ಯವಾಗಿ ಲೇಖಕಿಯರು ಚಿಂತಿಸಬೇಕಾದ ಸೃಜನಶೀಲ ಸವಾಲಾಗಿದೆ, ಎಂದು ಹೇಳಿದರು.

ವಿಜಯಾದಬ್ಬೆಯವರು ಸ್ತ್ರೀವಾದದ ವಿವಿಧ ಆಯಾಮಗಳನ್ನು ವಿವರಿಸುತ್ತಾ ಕತೆಗಾರ್ತಿಯರು ಗಮನಿಸಬೇಕಾದ ಸ್ತ್ರೀ ಸಂವೇದನೆ, ಸ್ತ್ರೀಯಾತ್ಮಕತೆ, ಸ್ತ್ರೀವಾದಿ ಚಿಂತನೆಯ ನಡುವಿನ ಸೂಕ್ಷ್ಮ ವ್ಯತ್ಯಾಸಗಳನ್ನು ವಿವರಿಸಿದರು.

ಶಿಬಿರದಲ್ಲಿ ಶ್ರೀಮತಿಯರಾದ ನೀಳಾದೇವಿ, ರೇಖಾ ಕಾಬಂಡಕಿ, ಶಾರದೆ, ಭಾರತಿ ಕಾಸರಗೋಡು, ಶೀಲಾ ಅಂಕೋಲಾ, ನೇಮಿಚಂದ್ರ, ಎಂ. ಎಸ್. ವೇದಾ, ಭಾಗೀರಥೀ ಹೆಗಡೆ ಮುಂತಾದ ಹಲವಾರು ಗಮನಾರ್ಹ ಲೇಖಕಿಯರು ತಮ್ಮ ಕಥೆಗಳನ್ನು ವಾಚಿಸಿದರು. ಆ ಎಲ್ಲರ ಕಥೆಗಳ ಪ್ರತ್ಯಕ್ಷ ಚರ್ಚೆಯನ್ನು ಕೈಗೊಳ್ಳಲಾಯಿತು. ಸಮಕಾಲೀನ ಕಥೆಗಾರ್ತಿಯರು ಹೇಗೆ ಹೊಸ ಬಗೆಯ ವಸ್ತುಗಳ–ಹುಡುಕಾಟದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವತ್ತ ಜಾಗೃತರಾಗಿದ್ದಾರೆ, ಮತ್ತು ಹೇಗೆ ಹೊಸ ಅಭಿವ್ಯಕ್ತಿಗೆ ಯತ್ನಿಸುತ್ತಿದ್ದಾರೆಂಬುದನ್ನು ಈ ಒಟ್ಟು ಶಿಬಿರದ ಸಂದರ್ಭದಲ್ಲಿ ಗುರುತಿಸುವುದು ಸಾಧ್ಯವಾಯಿತು. ಇಂಥ ಶಿಬಿರಗಳ ಮೂಲಕ ಕತೆಗಾರ್ತಿಯರನ್ನು ಉತ್ಪಾದಿಸುವಂಥ ಉದ್ದೇಶವಿಲ್ಲದಿದ್ದರೂ ವಿಮರ್ಶಕರು, ಕತೆಗಾರರು ಮುಖಾಮುಖಿಯಾಗಿ ಸಂಧಾನ ನಡೆಸಿ, ಪರಸ್ಪರ ವಿಚಾರ ವಿನಿಮಯಕ್ಕೆ ಅವಕಾಶ ಕಲ್ಪಿಸುವ ಮೂಲಕ ಪ್ರಸ್ತುತ ಶಿಬಿರವು ಅರ್ಥಪೂರ್ಣವೆನಿಸಿತು. ಈ ಶಿಬಿರದಲ್ಲಿ ಭಾಗವಹಿಸಿದ ಕತೆಗಾರ್ತಿಯರ ಕಥೆಗಳು "ಕರ್ಮವೀರ" ವಾರಪತ್ರಿಕೆಯಲ್ಲಿ ಪ್ರಕಟವಾಗುತ್ತವೆ.



---

*Reg No. MAG (5) PRC, DEGL 036/89/87*
**BOOK-POST/Periodicals**

*To*

*If undelivered please return to :*
**Jagruthi Mahila Adhyayana Kendra**
401, Vijay Tower, 2nd Main, RPC Layout
Vijayanagar, II Stage, Bangalore–560 040